# ಮಾತು ಹೇಗಿರಬೇಕು?

✍ ಬಿಂತುಲ್ ಇಸ್ಲಾಮ್

ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಮಾನವನ ಬಾಯಿಂದ ಹೊರಡುವ ಪ್ರತಿಯೊಂದು ಮಾತೂ ಕೃತ್ಯವೂ ದಾಖಲಿಸಲ್ಪಡುತ್ತದೆ. ದೇವನಿಂದ ನಿಯುಕ್ತರಾದ ಪ್ರಾಮಾಣಿಕ ದೇವಚರರು ಅದನ್ನು ದಾಖಲಿಸುತ್ತಾರೆ. ಪರಲೋಕದಲ್ಲಿ ಆ ದಾಖಲೆಯು ದೇವನ ನ್ಯಾಯಾಲಯದಲ್ಲಿ ವಿಚಾರಣೆಗೊಳಗಾಗುತ್ತದೆ. ಮಾನವನ ಹೆಚ್ಚಿನೆಲ್ಲ ದುಷ್ಕೃತ್ಯಗಳಿಗೆ ಅವನ ನಾಲಗೆಯೇ ಕಾರಣವಾಗಿರುತ್ತದೆ. ಅದರ ದುರ್ಬಳಕೆಯಿಂದ ಅನೇಕ ಅನಾಹುತಗಳುಂಟಾಗುತ್ತದೆ. ಪರಲೋಕದಲ್ಲೂ ಅದರಿಂದಾಗಿ ಮಾನವನು ಶಿಕ್ಷೆ ಅನುಭವಿಸಬೇಕಾಗುತ್ತದೆ. ಪರಲೋಕದ ವಿಚಾರಣೆಯ ವೇಳೆ ಮಾನವನು ತನ್ನ ಪಾಪಗಳನ್ನು ನಿರಾಕರಿಸುತ್ತಾ ಹೋದರೆ ಅವನ ಮಾತನಾಡುವ ಸ್ವಾತಂತ್ರ್ಯವನ್ನು ಕಸಿದುಕೊಳ್ಳಲಾಗುತ್ತದೆ. ಅನಂತರ ಅದು ದೇವನ ಅಪ್ಪಣೆಯಂತೆ ತಾನೇ ಮಾತಾಡಿ ಅವನ ದುಷ್ಕೃತ್ಯಗಳನ್ನು ಒಂದೊಂದಾಗಿ ಹೇಳುವುದು. ಪವಿತ್ರ ಕುರ್‌ಆನಿನಲ್ಲಿ ಅದನ್ನು ಈ ರೀತಿ ಚಿತ್ರಿಸಲಾಗಿದೆ:-

''ಇಂದು ನಾವು ಇವರ ಬಾಯಿಗಳಿಗೆ ಮುದ್ರೆಯನ್ನೊತ್ತಿಬಿಡುವೆವು. ಇವರು ಭೂಲೋಕದಲ್ಲಿ ಏನು ಸಂಪಾದಿಸುತ್ತಿದ್ದರೆಂದು ಇವರ ಕೈಗಳು ನಮ್ಮೊಡನೆ ಮಾತಾಡುವವು ಮತ್ತು ಕಾಲುಗಳು ಸಾಕ್ಷ್ಯ ಹೇಳುವವು.'' (ಪವಿತ್ರ ಕುರ್‌ಆನ್, 36:65)

''ಮಾತು ಹೇಗಿರಬೇಕು?'' ಎಂಬ ಈ ಕೃತಿಯಲ್ಲಿ ಮಾನವನನ್ನು ವಿನಾಶಕ್ಕೊಯ್ಯಬಲ್ಲ ನಾಲಗೆಯಿಂದ ಹೊರಡುವ ಕೆಡುಕುಗಳನ್ನು ಪಟ್ಟಿ ಮಾಡಲಾಗಿದೆ. ಅದೇ ರೀತಿ ಅವುಗಳಿಂದ ಪಾರಾಗಲಿಕ್ಕಿರುವ ಮಾರ್ಗೋಪಾಯಗಳನ್ನು ತಿಳಿಸಲಾಗಿದೆ. ಈ ನಿಟ್ಟಿನಲ್ಲಿ ತನ್ನಿಂದ ನಾಲಗೆಯ ದುರ್ಬಳಕೆಯಾಗದಿರಲೆಂಬ ಉದ್ದೇಶದಿಂದ 40 ವರ್ಷಗಳ ಕಾಲ ಕೇವಲ ಕುರ್‌ಆನಿನ ಭಾಷೆಯಲ್ಲಿ ಮಾತಾಡಿದ ಓರ್ವ ಮಹಿಳೆಯ ನಿಲುವು ಆದರ್ಶಪ್ರಾಯವಾಗಿದೆ. ಈ ಕೃತಿಯ ಅಧ್ಯಯನದಿಂದ ನಾಲಗೆಯ ಅನಾಹುತಗಳಿಂದ ಪಾರಾಗುವ, ನಾಲಗೆಯನ್ನು ಉತ್ತಮವಾಗಿ ಬಳಸುವ ನಿಟ್ಟಿನಲ್ಲಿ ಮಾರ್ಗದರ್ಶನ ದೊರೆತೀತೆಂದು ನಿರೀಕ್ಷಿಸುತ್ತೇವೆ.

ಶಾಂತಿ ಪ್ರಕಾಶನ

# ಮುನ್ನುಡಿ

ಇಸ್ಲಾಮಿನಲ್ಲಿ ಖಂಡಿಸಲಾಗಿರುವ ಹೆಚ್ಚಿನ ಪಾಪಗಳು ನಾಲಗೆಯಿಂದಲೇ ಸಂಭವಿಸುತ್ತವೆ. ಹೀಗಾಗಿ ಇದರಿಂದಾಗುವ ಪಾಪಗಳಿಂದ ದೂರ ಉಳಿಯಲು ನಾಲಗೆಯ ಸಂರಕ್ಷಣೆಯು ಅತ್ಯವಶ್ಯಕವಾಗಿದೆ. ಪುಸ್ತಕದಲ್ಲಿ ಚರ್ಚಿಸಲಾಗಿರುವ ಹೆಚ್ಚಿನ ಅಂಶಗಳಿಗೆ ಪುರಾವೆಯಾಗಿ ಪವಿತ್ರ ಕುರ್‌ಆನಿನ ಸೂಕ್ತ ಮತ್ತು ಪ್ರವಾದಿವರ್ಯರ(ಸ) ವಚನಗಳನ್ನು ನೀಡಲಾಗಿದೆ.

ಹಝ್ರತ್ ಅನಸ್ ಬಿನ್ ಮಾಲಿಕ್(ರ) ವರದಿ ಮಾಡಿರುತ್ತಾರೆ. ಪ್ರವಾದಿವರ್ಯರು(ಸ) ಹೀಗೆ ಹೇಳಿದರು. ''ಸುಳ್ಳು ಹೇಳುವುದನ್ನು ಬಿಟ್ಟು ಬಿಡುವವನಿಗೆ ಅಲ್ಲಾಹನು ಸ್ವರ್ಗದ ಕಿನಾರೆಯಲ್ಲಿ ಒಂದು ಭವನ ನಿರ್ಮಿಸುವನು ಮತ್ತು ಸ್ವಯಂ ಸತ್ಯದಲ್ಲಿರುತ್ತಾ ವಿವಾದವನ್ನು ಕೊನೆಗೊಳಿಸುವಾತನಿಗೆ ಸ್ವರ್ಗದ ಮಧ್ಯದಲ್ಲಿ ಒಂದು ಭವನವನ್ನು ನಿರ್ಮಿಸಲಾಗುವುದು ಹಾಗೂ ತನ್ನ ನಡತೆಯನ್ನು ಉತ್ತಮಪಡಿಸಿಕೊಂಡಾತನಿಗೆ ಸ್ವರ್ಗದ ಮಹಡಿಯಲ್ಲಿ ಒಂದು ಭವನವನ್ನು ನಿರ್ಮಿಸಲಾಗುವುದು.'' (ತಿರ್ಮಿದಿ)

ಮುಸ್ಲಿಮರಿಗೆ ಕೆಲವು ಮೂಲ ವಿಶ್ವಾಸಗಳ ಬಗ್ಗೆ ತಿಳಿಸಲಾಗಿದ್ದು ಅವುಗಳ ಮೇಲೆ ಸುದೃಢ ವಿಶ್ವಾಸವಿಡುವುದು ಕಡ್ಡಾಯವಾಗಿದೆ. ಅದೇ ರೀತಿ ಕೆಲವು ಆರಾಧನೆಗಳನ್ನು ಅವರ ಮೇಲೆ ಕಡ್ಡಾಯಗೊಳಿಸಲಾಗಿದೆ. ಅವುಗಳನ್ನು ನಿರ್ವಹಿಸುವುದು ಅನಿವಾರ್ಯವಾಗಿದೆ. ಅದೇ ರೀತಿ ಅವರಿಗಾಗಿ ಉತ್ತಮ ಚಾರಿತ್ರ್ಯದ ವ್ಯವಸ್ಥೆಯನ್ನು ಮಾಡಲಾಗಿದೆ. ಅದರಂತೆ ತನ್ನ ಚಾರಿತ್ರ್ಯ ನಿರ್ಮಾಣ ಮಾಡುವುದು ಅತ್ಯವಶ್ಯಕವಾಗಿದೆ. ಈ ಅವಶ್ಯಕತೆಗಳ ಪೂರ್ತೀಕರಣಕ್ಕಾಗಿಯೇ ಈ ಕೃತಿಯನ್ನು ರಚಿಸಲಾಗಿದೆ.

ಬಿಂತುಲ್ ಇಸ್ಲಾಮ್

# ಅನುಕ್ರಮಣಿಕೆ

يَا أَيُّهَا الَّذِينَ آمَنُوا اتَّقُوا اللَّهَ وَقُولُوا قَوْلًا سَدِيدًا ﴿٧٠﴾
يُصْلِحْ لَكُمْ أَعْمَالَكُمْ وَيَغْفِرْ لَكُمْ ذُنُوبَكُمْ ۗ وَمَن يُطِعِ اللَّهَ وَرَسُولَهُ
فَقَدْ فَازَ فَوْزًا عَظِيمًا ﴿٧١﴾

''ಸತ್ಯ ವಿಶ್ವಾಸಿಗಳೇ, ಅಲ್ಲಾಹನನ್ನು ಭಯಪಡಿರಿ ಮತ್ತು ಸರಿಯಾದ ಮಾತನ್ನೇ ಹೇಳಿರಿ. ಅಲ್ಲಾಹ್ ನಿಮ್ಮ ಕರ್ಮಗಳನ್ನು ಸರಿಪಡಿಸುವನು ಮತ್ತು ನಿಮ್ಮ ಅಪರಾಧಗಳನ್ನು ಕ್ಷಮಿಸುವನು. ಯಾರು ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ಅನುಸರಣೆ ಮಾಡಿದನೋ ಅವನು ಮಹಾ ಯಶಸ್ಸನ್ನು ಪಡೆದನು.''

(ಪವಿತ್ರ ಕುರ್‌ಆನ್, 33:70-71)

# ನಾಲಗೆಯ ಸಂರಕ್ಷಣೆ

ಹರ್ಝ್ರುತ್ ಅಬ್ದುಲ್ಲಾ ಬಿನ್ ಮುಬಾರಕ್‌ರವರು(ರ) ಒಮ್ಮೆ ಪ್ರಯಾಣದಲ್ಲಿರುವಾಗ ಓರ್ವ ವೃದ್ಧ ಮಹಿಳೆಯು ಮರದ ಕೆಳಗೆ ಚಿಂತಾಕ್ರಾಂತರಾಗಿ ಕುಳಿತಿರುವುದನ್ನು ಕಂಡರು.

ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ಆ ಮಹಿಳೆಯ ಬಳಿ ಹೋಗಿ ಅಸ್ಸಲಾಮು ಅಲೈಕುಮ್ ಅಂದರು.

ಆ ಮಹಿಳೆ ಅದಕ್ಕೆ ಉತ್ತರದ ರೂಪದಲ್ಲಿ ಕುರ್‌ಆನಿನ ಈ ಸೂಕ್ತವನ್ನು ಪಠಿಸಿದರು.

**''ಸಲಾಮ್(ಶಾಂತಿ) ಎಂದು ಕರುಣಾನಿಧಿಯಾದ ಪ್ರಭುವಿನ ಕಡೆಯಿಂದ ಅವರಿಗೆ ಹೇಳಲಾಗಿದೆ.''** **(ಪವಿತ್ರ ಕುರ್‌ಆನ್, 36:58)**

ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ನಿಮ್ಮ ಮೇಲೆ ಅಲ್ಲಾಹನ ಕರುಣೆ ಇರಲಿ, ನೀವು ಇಲ್ಲೇನು ಮಾಡುತ್ತಿರುವಿರಿ? ಎಂದರು.

ಆ ಮಹಿಳೆ ಮತ್ತೆ ಉತ್ತರವಾಗಿ ಇನ್ನೊಂದು ಕುರ್‌ಆನಿನ ಸೂಕ್ತ ಪಠಿಸಿದರು.

**''ಅಲ್ಲಾಹನು ಮಾರ್ಗದರ್ಶನದಿಂದ ಯಾರನ್ನಾದರೂ ವಂಚಿಸಿಬಿಟ್ಟರೆ ಅವನಿಗೆ ಇನ್ನಾರೂ ಮಾರ್ಗದರ್ಶಕನಿಲ್ಲ.''** **(ಪವಿತ್ರ ಕುರ್‌ಆನ್, 7:186)**

ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ನೀವು ಎಲ್ಲಿಗೆ ಹೋಗುತ್ತಿರುವಿರಿ? ಎಂದು ಕೇಳಿದರು.

ಆ ಮಹಿಳೆಯು ಉತ್ತರದಲ್ಲಿ ಸ್ಪಷ್ಟವಾಗಿ ಯಾವುದೇ ಸ್ಥಳದ ಹೆಸರನ್ನು ಹೇಳದೆ ಕುರ್‌ಆನಿನ ಈ ಸೂಕ್ತ ಪಠಿಸಿದರು:

**''ತನ್ನ ಕೆಲವು ನಿದರ್ಶನಗಳನ್ನು ತೋರಿಸಿಕೊಡಲಿಕ್ಕಾಗಿ ತನ್ನ ದಾಸನನ್ನು ಒಂದು ರಾತ್ರಿ 'ಮಸ್ಜಿದುಲ್ ಹರಾಮ್'ನಿಂದ, ನಾವು ಪರಿಸರವನ್ನು ಸಮೃದ್ಧಗೊಳಿಸಿರುವಂತಹ 'ಅಕ್ಸಾ' ಮಸೀದಿಯ ತನಕ ಯಾನ ಮಾಡಿಸಿದವನು ಪರಮಪಾವನನು. ನಿಶ್ಚಯವಾಗಿಯೂ ಅವನು ಸರ್ವಶ್ರುತನೂ ಸರ್ವವೀಕ್ಷಕನೂ ಆಗಿರುತ್ತಾನೆ.''**

**(ಪವಿತ್ರ ಕುರ್‌ಆನ್, 17:01)**

ಅಂದರೆ ಮಕ್ಕಾದಿಂದ ಬೈತುಲ್ ಮುಕದ್ದಿಸ್‌ನೆಡೆಗೆ ಹೋಗುತ್ತಿರುವುದಾಗಿ ಅದರ ಅರ್ಥವಾಗಿತ್ತು.

ಮಹಿಳೆಯು ತನ್ನ ಯಾವುದೇ ಮಾತಿನ ಉತ್ತರವನ್ನು ಸಾಮಾನ್ಯ ಭಾಷೆಯಲ್ಲಿ ನೀಡದೆ ಕುರ್‌ಆನಿನ ಸೂಕ್ತಗಳ ರೂಪದಲ್ಲಿ ಉತ್ತರಿಸುತ್ತಿರುವುದನ್ನು ಅಬ್ದುಲ್ಲಾ ಬಿನ್ ಮುಬಾರಕ್(ರ) ಗಮನಿಸಿದರು.

ಆಗ ಅವರು ನೀವು ಯಾವ ಸಮಯದಿಂದ ಇಲ್ಲಿರುವಿರೆಂದು ಆ ಮಹಿಳೆಗೆ ಕೇಳಿದಾಗ, ಸತತ ಮೂರು ದಿನಗಳಿಂದ ಇಲ್ಲಿರುವುದಾಗಿ ಹೇಳಲು ಆ ಮಹಿಳೆಯು ಕುರ್‌ಆನಿನ ಈ ಸೂಕ್ತ ಪಠಿಸಿದರು

**''ಆಗ ಝಕರಿಯ್ಯಾ, ''ಓ ನನ್ನ ಪ್ರಭೂ, ನನಗೊಂದು ಸಂಕೇತವನ್ನು ನಿಶ್ಚಯಿಸಿ ಕೊಡು'' ಎಂದಾಗ ''ನೀನು ಎಡೆಬಿಡದೆ ಮೂರು ದಿನ ಜನರೊಡನೆ ಮಾತನಾಡಲಾಗದಿರುವುದೇ ನಿನಗೆ ಸಂಕೇತ'' ಎಂದು ಹೇಳಲಾಯಿತು.''**

**(ಪವಿತ್ರ ಕುರ್‌ಆನ್, 19:10)**

ಆಗ ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ನಿಮ್ಮ ಬಳಿ ಯಾವುದೇ ಆಹಾರವಿಲ್ಲದೆ ಈ ಮೂರು ದಿನಗಳನ್ನು ಹೇಗೆ ಕಳೆದಿರುವಿರೆಂದು ಕೇಳಿದರು.

ಅಲ್ಲಾಹನು ಯಾವ ರೀತಿಯಲ್ಲಾದರೂ ಆಹಾರ ನೀಡುತ್ತಾನೆಂದು ಹೇಳುವುದಕ್ಕಾಗಿ ಮತ್ತೊಂದು ಕುರ್‌ಆನಿನ ಸೂಕ್ತ ಪಠಿಸಿದರು.

**''ಅವನು ನನಗೆ ಉಣಿಸುತ್ತಾನೆ ಮತ್ತು ಕುಡಿಸುತ್ತಾನೆ.''**

**(ಪವಿತ್ರ ಕುರ್‌ಆನ್, 26:79)**

ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ನೀವು ವುಝೂ ಹೇಗೆ ಮಾಡುತ್ತೀರಿ? ಎಂದು ಕೇಳಿದರು.

ಆಗ ಮಹಿಳೆಯು ತನ್ನ ಬಳಿ ನೀರು ಇಲ್ಲದ ಕಾರಣ ತಯಮ್ಮುಮ್ ಮಾಡುವುದಾಗಿ ಹೇಳಲು ಮತ್ತೊಂದು ಕುರ್‌ಆನಿನ ಸೂಕ್ತ ಪಠಿಸಿದರು.

**''....ನಿಮಗೆ ನೀರು ಸಿಗದೆ ಹೋದರೆ, ಶುದ್ಧ ಮಣ್ಣನ್ನು ಉಪಯೋಗಿಸಿಕೊಳ್ಳಿರಿ ಮತ್ತು ಅದರಿಂದ ಮುಖಗಳನ್ನೂ, ಕೈಗಳನ್ನೂ ಸವರಿಕೊಳ್ಳಿರಿ....''**

**(ಪವಿತ್ರ ಕುರ್‌ಆನ್, 4:43)**

ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ಅವರ ಮುಂದೆ ಆಹಾರ ನೀಡಿ ತಿನ್ನುವಂತೆ ಹೇಳಿದರು.

ಆಗ ಆ ಮಹಿಳೆಯು ತಾನು ಉಪವಾಸವಿರುವುದನ್ನು ತಿಳಿಸಲು ಕುರ್‌ಆನಿನ ಇನ್ನೊಂದು ಸೂಕ್ತ ಪಠಿಸಿದರು.

**''....ರಾತ್ರಿಯವರೆಗೆ ನಿಮ್ಮ ಉಪವಾಸವ್ರತವನ್ನು ಪೂರ್ತಿಗೊಳಿಸಿರಿ....''**

**(ಪವಿತ್ರ ಕುರ್‌ಆನ್, 2:187)**

ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ಉಪವಾಸವಿರಲು ಇದು ರಮಝಾನ್ ತಿಂಗಳಲ್ಲವಲ್ಲವೆಂದು ಹೇಳಿದಾಗ ಆ ಮಹಿಳೆ ತಾನು ಐಚ್ಛಿಕ(ನಫಿಲ್) ಉಪವಾಸವಿರುವುದಾಗಿ ತಿಳಿಸಲು ಕುರ್‌ಆನಿನ ಈ ಸೂಕ್ತವನ್ನು ಪಠಿಸಿದರು.

**''....ಮತ್ತು ಸ್ವಯಂಪ್ರೇರಣೆಯಿಂದ ಸತ್ಕರ್ಮ ಮಾಡುವವನನ್ನು ಅಲ್ಲಾಹ್ ಬಲ್ಲವನೂ, ಅವನನ್ನು ಗೌರವಿಸುವವನೂ ಆಗಿರುತ್ತಾನೆ.'' (ಪವಿತ್ರ ಕುರ್‌ಆನ್, 2:158)**

ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ಆದರೆ ಪ್ರಯಾಣದಲ್ಲಿ ಉಪವಾಸ ಬಿಡುವ ಅವಕಾಶವಿದೆಯಲ್ಲವೆಂದು ಕೇಳಿದಾಗ ಮಹಿಳೆ ಉತ್ತರಿಸುತ್ತಾ

**''....ಆದರೆ ನೀವು ಅರಿಯುವವರಾಗಿದ್ದರೆ ಉಪವಾಸವಿರುವುದೇ ನಿಮಗೆ ಅತ್ಯುತ್ತಮ ಎಂದರು.'' (ಪವಿತ್ರ ಕುರ್‌ಆನ್, 2:184)**

ನಾನು ಮಾತನಾಡುವ ಹಾಗೆ ನೀವೇಕೆ ನನ್ನ ಜೊತೆ ಮಾತನಾಡುತ್ತಿಲ್ಲವೆಂದು ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ಕೇಳಿದರು.

ಮಹಿಳೆ ಅದಕ್ಕುತ್ತರಿಸುತ್ತಾ ಮನುಷ್ಯನು ತನ್ನ ಬಾಯಿಯಿಂದ ಹೊರಡಿಸುವ ಯಾವುದೇ ಮಾತು ಅಲ್ಲಾಹನ ಬಳಿ ದಾಖಲೆಯಾಗದೆ ಇರುವುದಿಲ್ಲ ಹೀಗಾಗಿ ನನ್ನ ಬಾಯಿಯಿಂದ ಯಾವುದಾದರೂ ಅನವಶ್ಯಕ ಮಾತು ಹೊರಟುಬಿಡುವ ಭಯದಿಂದ ಹೀಗೆ ಮಾಡುತ್ತಿರುವುದಾಗಿ ತಿಳಿಸಲು ಕುರ್‌ಆನಿನ ಈ ಕೆಳಗಿನ ಸೂಕ್ತ ಪಠಿಸಿದರು.

**''ಅವನ ಬಾಯಿಯಿಂದ ಹೊರಡುವ ಯಾವ ಮಾತು ಕೂಡಾ, ಸದಾ ಸನ್ನದ್ಧನಿರುವ ಒಬ್ಬ ಕಾವಲುಗಾರನಿಂದ ದಾಖಲಿಸಲ್ಪಡದೆ ಇರುವುದಿಲ್ಲ.''(ಪವಿತ್ರ ಕುರ್‌ಆನ್, 50:18)**

ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ನೀವು ಯಾವ ಗೋತ್ರಕ್ಕೆ ಸೇರಿದವರೆಂದು ಕೇಳಿದರು.

ಅದರಿಂದ ತನಗೇನಾಗಬೇಕೆಂದು ಹೇಳಲು ಮಹಿಳೆಯು ಕುರ್‌ಆನಿನ ಈ ಸೂಕ್ತ ಪಠಿಸಿದರು.

''ನಿಮಗೆ ಜ್ಞಾನವಿಲ್ಲದಂತಹ ವಸ್ತುಗಳನ್ನು ಬೆಂಬತ್ತಬೇಡಿರಿ. ನಿಶ್ಚಯವಾಗಿಯೂ ಶ್ರವಣ, ದೃಷ್ಟಿ ಮತ್ತು ಮನಸ್ಸು ಇವೆಲ್ಲವುಗಳ ವಿಚಾರಣೆ ನಡೆಯಲಿದೆ.''

**(ಪವಿತ್ರ ಕುರ್‌ಆನ್, 17:36)**

ಇದನ್ನು ಕೇಳಿದ ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ನನ್ನಿಂದ ತಪ್ಪಾಯಿತು ಕ್ಷಮಿಸಿಯೆಂದರು.

ಮಹಿಳೆ ಕ್ಷಮಿಸಿರುವುದನ್ನು ವ್ಯಕ್ತಪಡಿಸಲು ಹೀಗೆ ಹೇಳಿದರು

**''ಆಗ ಅವರು, ''ಇಂದು ನಿಮ್ಮ ಮೇಲೆ ಯಾವ ದೋಷಾರೋಪಣೆಯೂ ಇಲ್ಲ, ಅಲ್ಲಾಹ್ ನಿಮ್ಮನ್ನು ಕ್ಷಮಿಸಲಿ. ಅವನು ಎಲ್ಲರಿಗಿಂತಲೂ ಮಿಗಿಲಾದ ದಯಾಮಯನಾಗಿರುತ್ತಾನೆ.'' (ಪವಿತ್ರ ಕುರ್‌ಆನ್, 12:92)**

ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ಅವರಿಗೆ ನನ್ನ ಬಳಿ ಒಂಟೆಯಿದೆ, ನೀವು ಅದರ ಮೇಲೆ ಕುಳಿತರೆ ನೀವೆಲ್ಲಿಗೆ ಹೋಗಬೇಕೋ ಅಲ್ಲಿಗೆ ತಲುಪಿಸಲು ಸಿದ್ಧವೆಂದು ಹೇಳಿದರು.

ಮಹಿಳೆ ಅವರಿಗೆ ಧನ್ಯವಾದ ವ್ಯಕ್ತಪಡಿಸಲು ಮತ್ತೊಂದು ಸೂಕ್ತ ಪಠಿಸಿದರು.

''....ನೀವು ಯಾವ ಸತ್ಕಾರ್ಯಗಳನ್ನು ಮಾಡಿದರೂ ಅದು ಅಲ್ಲಾಹನ ಅರಿವಿನಲ್ಲಿರುವುದು.....'' (ಪವಿತ್ರ ಕುರ್‌ಆನ್, 2: 197)

ಆಗ ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ಆ ಮಹಿಳೆಗೆ ಒಂಟೆಯ ಮೇಲೇರಲು ಹೇಳುತ್ತಾ ತನ್ನ ಒಂಟೆಯನ್ನು ಅವರ ಬಳಿ ನಿಲ್ಲಿಸಿದರು. ತರುವಾಯ ಮಹಿಳೆಯು ಕುರ್‌ಆನಿನ ಈ ಸೂಕ್ತಗಳನ್ನು ಪಠಿಸಿದರು.

**''ಪೈಗಂಬರರೇ, ಸತ್ಯವಿಶ್ವಾಸಿಗಳೊಡನೆ ತಮ್ಮ ದೃಷ್ಟಿಗಳನ್ನು ಕೆಳಗಿರಿಸಿಕೊಳ್ಳಲಿಕ್ಕೂ ತಮ್ಮ ಗುಪ್ತಾಂಗಗಳನ್ನು ರಕ್ಷಿಸಿಕೊಳ್ಳಲಿಕ್ಕೂ ಹೇಳಿರಿ. ಇದು ಅವರ ಪಾಲಿಗೆ ಹೆಚ್ಚು ಪರಿಶುದ್ಧವಾದ ಕ್ರಮವಾಗಿದೆ. ಅಲ್ಲಾಹನು ಅವರು ಮಾಡುವುದೆಲ್ಲವನ್ನೂ ಅರಿಯುವವನಾಗಿದ್ದಾನೆ.''**

(ಪವಿತ್ರ ಕುರ್‌ಆನ್, 24:30)

**''....ಇವುಗಳನ್ನು ನಮಗಾಗಿ ನಿಯಂತ್ರಿಸಿಕೊಟ್ಟವನು ಪರಮ ಪಾವನನು. ಅನ್ಯಥಾ ನಾವು ಇವುಗಳನ್ನು ಹತೋಟಿಗೆ ತರಲು ಶಕ್ತರಾಗಿರಲಿಲ್ಲ- ಮತ್ತು ನಮಗೊಂದು ದಿನ ನಮ್ಮ ಪ್ರಭುವಿನ ಕಡೆಗೇ ಮರಳಲಿಕ್ಕಿದೆ.''** (ಪವಿತ್ರ ಕುರ್‌ಆನ್, 43:13-14)

ಇದನ್ನು ಕೇಳಿದ ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ಕಣ್ಣು ಮುಚ್ಚಿಕೊಂಡರು. ಆ ಮಹಿಳೆಯು ಒಂಟೆಯೇರುವಾಗ ಒಂಟೆ ಬೆದರಿದರಿಂದ, ಅದರ ಜೇನಿಗೆ ಸಿಲುಕಿ ಅವರ ಬಟ್ಟೆ ಹರಿದು ಹೋದವು. ಆಗ ಮಹಿಳೆಯು ಈ ಸೂಕ್ತ ಪಠಿಸಿದರು.

**''ನಿಮಗೆ ಒದಗಿರುವ ಯಾವುದೇ ಸಂಕಷ್ಟವು ನಿಮ್ಮ ಕೈಗಳ ಗಳಿಕೆಯಿಂದಲೇ ಆಗಿದೆ. ಅನೇಕ ಪಾಪಗಳನ್ನು ಅವನು ಹಾಗೆಯೇ ಕ್ಷಮಿಸಿ ಬಿಡುತ್ತಾನೆ.''**

(ಪವಿತ್ರ ಕುರ್‌ಆನ್, 42:30)

ಇದನ್ನು ನೋಡಿ ಅಬ್ದುಲ್ಲಾರವರು(ರ) ಒಂಟೆಯ ಮೊಣಕಾಲು ಕಟ್ಟಿದರು. ಆಗ ಆ ಮಹಿಳೆ ಸುಲಭವಾಗಿ ಅದರ ಮೇಲೇರಿದರು.

ಈಗ ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ಒಂಟೆಯ ಲಗಾಮು ಹಿಡಿದು ಜೋರಾಗಿ ಕೂಗುತ್ತಾ ವೇಗದಿಂದ ಒಂಟೆಯನ್ನು ಓಡಿಸ ತೊಡಗಿದರು.

ಆಗ ಮೇಲೆ ಕುಳಿತಿದ್ದ ಆ ಮಹಿಳೆಯು ಹೀಗೆ ಹೇಳಿದರು.

''ನಿನ್ನ ನಡೆಯಲ್ಲಿ ಇತಿಮಿತಿಯನ್ನಿರಿಸು. ನಿನ್ನ ಸ್ವರವನ್ನು ಸ್ವಲ್ಪ ತಗ್ಗಿಸು.....''

(ಪವಿತ್ರ ಕುರ್ ಆನ್, 31:19)

ಇದನ್ನು ಕೇಳಿದ ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ತನ್ನ ಸ್ವರವನ್ನು ತಗ್ಗಿಸಿದರಲ್ಲದೆ, ವೇಗವನ್ನು ಸಹ ಕಡಿಮೆಗೊಳಿಸಿದರು.

ಆಗ ಆ ಮಹಿಳೆಯು ಕವನಗಳಿಗಿಂತ ಕುರ್‌ಆನ್ ಪಠಿಸುವುದು ಉತ್ತಮವೆಂದು ಅಬ್ದುಲ್ಲಾ ಬಿನ್ ಮುಬಾರಕ್‌ರಿಗೆ(ರ) ತಿಳಿಸಲು ಈ ಸೂಕ್ತ ಪಠಿಸಿದರು.

**''....ಇನ್ನು (ಮುಂದೆ) ಕುರ್‌ಆನಿನಿಂದ, ಸುಲಭವಾಗಿ ಪಠಿಸಲು ನಿಮಗೆ ಸಾಧ್ಯವಿರುವಷ್ಟನ್ನು ಪಠಿಸಿರಿ.....''** **(ಪವಿತ್ರ ಕುರ್‌ಆನ್, 73:20)**

ಸ್ವಲ್ಪ ದೂರ ಹೋದ ನಂತರ ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ಆ ಮಹಿಳೆಯನ್ನು ನಿಮ್ಮ ಪತಿಯಿದ್ದಾರೆಯೇ? ಎಂದು ಕೇಳಿದರು. ಅದಕ್ಕೆ ಮಹಿಳೆ ಹೀಗೆ ಉತ್ತರಿಸಿದರು.

**''ಓ ಸತ್ಯವಿಶ್ವಾಸಿಗಳೇ, ಬಹಿರಂಗಗೊಳಿಸಿದರೆ ನಿಮಗೆ ಅಪ್ರಿಯವಾಗಬಹುದಾದಂಥ ವಿಷಯಗಳ ಬಗ್ಗೆ ಪ್ರಶ್ನಿಸಬೇಡಿ.....''** **(ಪವಿತ್ರ ಕುರ್‌ಆನ್, 5:101)**

ಇದರರ್ಥ, ಈ ಪ್ರಶ್ನೆ ಕೇಳುವ ಅಗತ್ಯವಿರಲಿಲ್ಲವೆಂಬುದಾಗಿತ್ತು.

ಇದನ್ನು ಕೇಳಿದ ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ಸುಮ್ಮನಾದರು ಮತ್ತು ಮುಂದೆ ಸಾಗುತ್ತಾ ಒಂದು ಪ್ರವಾಸಿ ತಂಡದತ್ತ ಬಂದು ತಲುಪಿದರು.

ಅಬ್ದುಲ್ಲಾರು(ರ) ಈ ತಂಡದಲ್ಲಿ ನಿಮ್ಮ ಸಂಬಂಧಿಕರಿದ್ದಾರೆಯೇ? ಎಂದು ಕೇಳಿದರು. ಅದಕ್ಕೆ ಮಹಿಳೆಯ ಉತ್ತರ ಈ ಸೂಕ್ತವಾಗಿತ್ತು.

**''ಈ ಸೊತ್ತು ಮತ್ತು ಈ ಸಂತತಿಗಳು ಕೇವಲ ಲೌಕಿಕ ಜೀವನದ ಕ್ಷಣಿಕ ಸೊಬಗು ಮಾತ್ರ....''** **(ಪವಿತ್ರ ಕುರ್‌ಆನ್, 18:46)**

ಅಬ್ದುಲ್ಲಾರಿಗೆ(ರ) ಆ ಪ್ರವಾಸಿ ತಂಡದಲ್ಲಿ ಇವರ ಮಕ್ಕಳಿರುವರೆಂದು ಅರ್ಥವಾಯಿತು. ಅವರ ವಿಳಾಸ ಹೇಳಿದರೆ ನಾನು ಅವರನ್ನು ಹುಡುಕಬಹುದೆಂದು ಆ ಮಹಿಳೆಗೆ ತಿಳಿಸಿದರು.

ಆಗ ಮಹಿಳೆ ಅವರು ಆ ತಂಡದ ಮಾರ್ಗದರ್ಶಕರೆಂದು ತಿಳಿಸಲು

**''ಅವನು ಭೂಮಿಯಲ್ಲಿ ಮಾರ್ಗಗಳನ್ನು ತೋರಿಸುವ ಕುರುಹುಗಳನ್ನಿರಿಸಿದನು ಮತ್ತು ಜನರು ನಕ್ಷತ್ರಗಳಿಂದಲೂ ದಾರಿಗಾಣುತ್ತಾರೆ''** ಎಂಬ ಸೂಕ್ತ ಪಠಿಸಿದರು.

**(ಪವಿತ್ರ ಕುರ್‌ಆನ್, 16:16)**

ಆಗ ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ಅವರ ಹೆಸರುಗಳನ್ನು ಕೇಳಿದಾಗ ಮಹಿಳೆಯು ಉತ್ತರವಾಗಿ ಈ ಕೆಳಗಿನ ಸೂಕ್ತಗಳನ್ನು ಪಠಿಸಿದರು.

**''....ಅಲ್ಲಾಹನು ತನ್ನ ಮಿತ್ರನಾಗಿಸಿಕೊಂಡ ಆ ಇಬ್ರಾಹೀಮರ....''**

**(ಪವಿತ್ರ ಕುರ್‌ಆನ್, 4:125)**

**''....ಅಲ್ಲಾಹ್ ಮೂಸಾರೊಡನೆ, ಮಾತನಾಡುವ ರೀತಿಯಲ್ಲೇ ಮಾತನಾಡಿದನು.''**

**(ಪವಿತ್ರ ಕುರ್‌ಆನ್, 4:164)**

"ಓ ಯಹ್ಯಾ ದಿವ್ಯ ಗ್ರಂಥವನ್ನು ಬಿಗಿಹಿಡಿದುಕೋ...."(ಪವಿತ್ರ ಕುರ್‌ಆನ್, 19:12)

ಈಗ ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ಈ ಹೆಸರುಗಳನ್ನು ಕರೆದಾಗ ಆ ತಂಡದಿಂದ ಮೂವರು ಯುವಕರು ಬಂದು ಅಬ್ದುಲ್ಲಾರತ್ತ(ರ) ಬಂದರು ಮತ್ತು ತನ್ನ ತಾಯಿಯನ್ನು ಒಂಟೆಯಿಂದ ಕೆಳಗಿಳಿಸಿದರು.

ಆ ಮಹಿಳೆಯು ಯುವಕರನ್ನು ಕುರಿತು ಅಬ್ದುಲ್ಲಾರಿಗಾಗಿ(ರ) ಊಟದ ವ್ಯವಸ್ಥೆ ಮಾಡಿ ಎಂದು ತಿಳಿಸಲು ಈ ಸೂಕ್ತ ಪಠಿಸಿದರು.

"....ಈಗ ನಾವು ನಮ್ಮಲ್ಲೊಬ್ಬನನ್ನು ಬೆಳ್ಳಿಯ ಈ ನಾಣ್ಯ ಕೊಟ್ಟು ಪೇಟೆಗೆ ಕಳುಹಿಸೋಣ. ಅವನು ಅತ್ಯುತ್ತಮ ಆಹಾರ ಎಲ್ಲಿ ಸಿಗುತ್ತದೆಂದು ನೋಡಲಿ. ಅಲ್ಲಿಂದ ಅವನು ಸ್ವಲ್ಪ ಆಹಾರವನ್ನು ತರಲಿ...." (ಪವಿತ್ರ ಕುರ್‌ಆನ್, 18:19)

ಆ ಯುವಕರಲ್ಲಿ ಒಬ್ಬ ಪೇಟೆಗೆ ಹೋಗಿ ತಿನ್ನಲಿಕ್ಕಾಗಿ ಆಹಾರ ತಂದಾಗ ಮಹಿಳೆಯು ಅಬ್ದುಲ್ಲಾರನ್ನು(ರ) ಉದ್ದೇಶಿಸಿ ಹೇಳಿದರು.

"(ಇಂತಹವರೊಡನೆ) "ನೀವು ಕಳೆದು ಹೋದ ದಿನಗಳಲ್ಲಿ ಮಾಡಿರುವ ಸತ್ಕರ್ಮಗಳ ಪ್ರತಿಫಲವಾಗಿ ಸಂತೋಷದಿಂದ ತಿನ್ನಿರಿ ಮತ್ತು ಕುಡಿಯಿರಿ (ಎಂದು ಹೇಳಲಾಗುವುದು)."
(ಪವಿತ್ರ ಕುರ್‌ಆನ್, 69:24)

ಅಬ್ದುಲ್ಲಾ ಬಿನ್ ಮುಬಾರಕ್‌ರು(ರ) ಈ ಮಹಿಳೆಯ ಕುರ್‌ಆನಿನ ಪಾಂಡಿತ್ಯವನ್ನು ಕಂಡು ಬೆರಗಾದರು. ಪುನರುತ್ಥಾನದ ದಿನದಂದು ಅಲ್ಲಾಹನ ಬಳಿಯಿರುವ ವಿಚಾರಣೆಯ ಭಯದಿಂದ ಕಳೆದ 40 ವರ್ಷಗಳಲ್ಲಿ ನಮ್ಮ ತಾಯಿಯು ಕುರ್‌ಆನಿನ ಸೂಕ್ತಗಳಲ್ಲದೇ ಮತ್ತೇನೂ ಮಾತನಾಡಿಲ್ಲವೆಂದು ಆ ಯುವಕರು ತಿಳಿಸಿದರು.

ನಾಲಗೆ ಸಂರಕ್ಷಣೆಯ ನಿಟ್ಟಿನಲ್ಲಿ ಈ ರೀತಿಯ ಉನ್ನತ ಮಟ್ಟ ಕಾಯ್ದುಕೊಳ್ಳುವುದು ನಮ್ಮಂಥ ಸಾಮಾನ್ಯ ಜನರಷ್ಟೇ ಅಲ್ಲ, ಎಂತಹ ವಿಶೇಷ ವ್ಯಕ್ತಿಗಳಿಂದಲೂ ಸಾಧ್ಯವಿಲ್ಲ, ಯಾರ ಮನದಲ್ಲಿ ತನ್ನನ್ನು ಪಾಪಗಳಿಂದ ಸಂರಕ್ಷಿಸಿಕೊಳ್ಳುವ ಹುಮ್ಮಸ್ಸು ಈ ರೀತಿಯಲ್ಲಿರುತ್ತದೋ ಅವರು ಯಾವ ಉನ್ನತ ಮಟ್ಟಕ್ಕೆ ಹೋಗಬಹುದೆಂದು ತಿಳಿಸುವುದೇ ಇಲ್ಲಿ ಈ ಕಥೆಯನ್ನು ಹೇಳಿರುವುದರ ಉದ್ದೇಶವಾಗಿದೆ.

ವಾಸ್ತವದಲ್ಲಿ ಮನುಷ್ಯನಿಂದಾಗುವ ಹೆಚ್ಚಿನ ಪಾಪಗಳಲ್ಲಿ ನಾಲಗೆಯು ಬಹುಮುಖ್ಯ ಪಾತ್ರವಹಿಸುತ್ತದೆ.

ಹಝ್ರತ್ ಮುಆದ್ ಬಿನ್ ಜಬಲ್‌ರು(ರ) ಈ ರೀತಿ ವರದಿ ಮಾಡಿರುತ್ತಾರೆ,

ನಾನು ಒಮ್ಮೆ ಪ್ರವಾದಿವರ್ಯ(ಸ)ರೊಂದಿಗೆ ಒಂದು ಪ್ರಯಾಣದಲ್ಲಿದ್ದೆ, ಒಂದು ದಿನ ನಡೆಯುವಾಗ ನಾನು ಪ್ರವಾದಿವರ್ಯರ(ಸ) ಹತ್ತಿರ ಬಂದು 'ನನಗೆ ಸ್ವರ್ಗಕ್ಕೆ

ಅರ್ಹನಾಗಿಸುವ ಮತ್ತು ನರಕದಿಂದ ರಕ್ಷಿಸುವ ಕರ್ಮಗಳ ಬಗ್ಗೆ ತಿಳಿಸಿ' ಎಂದು ಕೇಳಿದೆ.

ಪ್ರವಾದಿವರ್ಯರು(ಸ) ''ನೀನು ಒಂದು ದೊಡ್ಡ ಮಾತನ್ನು ಕೇಳಿಬಿಟ್ಟೆ, ಆದರೆ ಅಲ್ಲಾಹ್ ಯಾರಿಗಾಗಿ ಇದನ್ನು ಸುಲಭಗೊಳಿಸಿದನೋ ಅದು ಅವನಿಗೆ ಸುಲಭವಾಗಿರುವುದೆಂದರು.''

ತರುವಾಯ ಪ್ರವಾದಿವರ್ಯರು(ಸ) ಹೀಗೆ ಹೇಳಿದರು, ''ನೀನು ಅಲ್ಲಾಹನ ಆರಾಧನೆ ಮಾಡು ಮತ್ತು ಯಾರನ್ನೂ ಅವನೊಂದಿಗೆ ಸಹಭಾಗಿಯನ್ನಾಗಿಸಬೇಡ. ನಮಾಝ್ ಸಂಸ್ಥಾಪಿಸು, ಝಕಾತ್ ಪಾವತಿಸು, ರಮಝಾನ್ ತಿಂಗಳಿನ ಉಪವಾಸ ವ್ರತ ಆಚರಿಸು ಹಾಗೂ ಅಲ್ಲಾಹನ ಭವನದ ಹಜ್ಜ್ ನಿರ್ವಹಿಸು.''

ತರುವಾಯ ಪ್ರವಾದಿವರ್ಯರು(ಸ) ಮಾತನ್ನು ಮುಂದುವರಿಸುತ್ತಾ

''ನಾನು ನಿನಗೆ ಒಳಿತಿನ ದ್ವಾರಗಳ ಕುರಿತು ಮಾರ್ಗದರ್ಶನ ಮಾಡಬೇಡವೇ? ಉಪವಾಸ ವ್ರತವು (ಪಾಪಗಳಿಂದ ರಕ್ಷಿಸುವ) ಗುರಾಣಿಯಾಗಿದೆ ಮತ್ತು ದೇವ ಮಾರ್ಗದಲ್ಲಿ ಖರ್ಚು ಮಾಡುವುದು ಹಾಗೂ ಮಧ್ಯರಾತ್ರಿ ನಮಾಝ್ ಮಾಡುವುದು, ನೀರು ಬೆಂಕಿಯನ್ನು ಆರಿಸುವ ಹಾಗೆ ನಮ್ಮ ಪಾಪಗಳನ್ನು ಆರಿಸಿ ಬಿಡುವಂತಹ ಕರ್ಮಗಳಾಗಿವೆ.'' ಎಂದು ಹೇಳಿ ಪವಿತ್ರ ಕುರ್‌ಆನಿನ ಈ ಸೂಕ್ತ ಪಠಿಸಿದರು.

تَتَجَافَىٰ جُنُوبُهُمْ عَنِ الْمَضَاجِعِ يَدْعُونَ رَبَّهُمْ خَوْفًا وَطَمَعًا وَمِمَّا رَزَقْنَاهُمْ يُنفِقُونَ ﴿١٦﴾
فَلَا تَعْلَمُ نَفْسٌ مَّا أُخْفِيَ لَهُم مِّن قُرَّةِ أَعْيُنٍ جَزَاءً بِمَا كَانُوا يَعْمَلُونَ ﴿١٧﴾

''ಅವರ ಬೆನ್ನುಗಳು ಹಾಸಿಗೆಗಳನ್ನು ಬಿಟ್ಟಿರುತ್ತವೆ. ತಮ್ಮ ಪ್ರಭುವನ್ನು ಭಯ ಹಾಗೂ ನಿರೀಕ್ಷೆಯೊಂದಿಗೆ ಪ್ರಾರ್ಥಿಸುತ್ತಾರೆ. ನಾವು ಅವರಿಗೆ ದಯಪಾಲಿಸಿರುವ ಜೀವನಾಧಾರ ದಿಂದ ಖರ್ಚು ಮಾಡುತ್ತಾರೆ. ಮುಂದೆ ಅವರ ಕರ್ಮಗಳಿಗೆ ಪ್ರತಿಫಲವಾಗಿ ಅವರ ಕಣ್ಮನಗಳನ್ನು ತಣಿಸುವಂತಹ ಯಾವ ಸತ್ಫಲಗಳನ್ನು ಅವರಿಗಾಗಿ ಬಚ್ಚಿಡಲಾಗಿದೆಯೋ ಅದರ ಅರಿವು ಯಾವ ಜೀವಿಗೂ ಇಲ್ಲ. '' (ಪವಿತ್ರ ಕುರ್‌ಆನ್, 32:16-17)

ತರುವಾಯ ಪ್ರವಾದಿರ್ಯರು(ಸ) ''ನಾನು ನಿಮಗೆ ಎಲ್ಲ ವಿಷಯ(ಧರ್ಮ)ಗಳ ನಾಯಕ(ಕರ್ಮ) ಮತ್ತು ಅದರ ಆಧಾರ ಸ್ತಂಭ ಹಾಗೂ ಅದರ ಅತ್ಯುನ್ನತ ದರ್ಜೆಯ ಬಗ್ಗೆ ತಿಳಿಸಬೇಡವೇ?'' ಎಂದರು.

ನಾನು 'ಖಂಡಿತವಾಗಿ ತಿಳಿಸಿರಿ' ಎಂದಾಗ,

ಪ್ರವಾದಿವರ್ಯರು(ಸ) ಹೇಳಿದರು, ''ವಿಷಯ(ಧರ್ಮ)ಗಳ ನಾಯಕ(ಕರ್ಮ) ಇಸ್ಲಾಮ್ ಆಗಿದೆ ಮತ್ತು ಅದರ ಆಧಾರ ಸ್ತಂಭ ನಮಾಝ್ ಆಗಿದೆ ಹಾಗೂ ಅದರ ಅತ್ಯುನ್ನತ ದರ್ಜೆ ಜಿಹಾದ್ ಆಗಿದೆ.''

ತರುವಾಯ ಪ್ರವಾದಿವರ್ಯರು(ಸ) ''ಈ ಎಲ್ಲಾ ವಿಷಯಗಳ ಮುಖ್ಯವಾದ ವಿಭಾಗದ ಬಗ್ಗೆ ಹೇಳಲೇ?'' ಎಂದರು.

'ನಾನು ಖಂಡಿತವಾಗಿ ತಿಳಿಸಿ' ಎಂದೆನು.

ಪ್ರವಾದಿವರ್ಯರು(ಸ) ತಮ್ಮ ನಾಲಗೆ ಹಿಡಿದು ಹೀಗೆ ಹೇಳಿದರು, ''ನೀವು ಇದನ್ನು ಕಡ್ಡಾಯವಾಗಿ ತಡೆಹಿಡಿಯಬೇಕು.''

ಆಗ ನಾನು 'ಪ್ರವಾದಿಗಳೇ! ನಮ್ಮ ಪ್ರತಿಯೊಂದು ಮಾತುಗಳೂ ಪ್ರಶ್ನಾರ್ಹವಾಗಿರುವುದೇ?' ಎಂದು ಕೇಳಿದೆ. ಅದಕ್ಕೆ ಪ್ರವಾದಿ(ಸ),

''ಮುಆದ್ ! ಹೌದು, ನಾಲಗೆಯ ಕೃತ್ಯಗಳೇ ಜನರನ್ನು ನರಕಕ್ಕೆ ದೂಡುತ್ತವೆ.'' ಎಂದರು.

ನಾಲಗೆಯಿಂದ ಹೊರಡುವ ಮಾತುಗಳಲ್ಲಿಯೂ ಹಲವಾರು ವಿಧಗಳಿವೆ. ಪರನಿಂದೆ, ಚಾಡಿ, ಸುಳ್ಳು, ತೆಗಳಿಕೆ, ತಪ್ಪು ಹುಡುಕುವುದು, ಅಶ್ಲೀಲ ಮಾತುಗಳು, ಅಪವಾದ ಹೊರಿಸುವುದು, ಹೀನೈಸುವಿಕೆ, ಅಪಹಾಸ್ಯ ಮಾಡುವುದು, ಶಪಿಸುವುದು, ವದಂತಿ ಹರಡುವುದು, ಮಯ್ಯಿತ್‌ನ ಮೇಲೆ ರೋದಿಸುವುದು ಇತ್ಯಾದಿ ಪಾಪಗಳು ನಾಲಗೆಯಿಂದಾಗಿಯೇ ಸಂಭವಿಸುವಂತಹವುಗಳಾಗಿವೆ. ಇವುಗಳಲ್ಲದೇ ಅಸೂಯೆ, ಅಹಂಕಾರ, ಕೋಪ, ತಾತ್ಸಾರ ಭಾವನೆಗಳಂತಹ ಆತ್ಮದ ರೋಗಗಳು ನಾಲಗೆಯ ಉಪಯೋಗದಿಂದಲೇ ಪ್ರಕಟವಾಗುತ್ತವೆ. ಒಂದು ವೇಳೆ ಮನುಷ್ಯನು ಪ್ರವಾದಿವರ್ಯರ(ಸ) ವಚನಗಳಿಗನುಗುಣವಾಗಿ ನಡೆಯುತ್ತಾ ತನ್ನ ನಾಲಗೆಯನ್ನು ಹತೋಟಿಯಲ್ಲಿಟ್ಟರೆ, ಈ ಎಲ್ಲಾ ಪಾಪಗಳಿಂದ ತನ್ನನ್ನು ರಕ್ಷಿಸಿಕೊಳ್ಳಬಹುದು.

ನಾಲಗೆ ಸಂರಕ್ಷಣೆಯ ಮಹತ್ವವು ಪ್ರವಾದಿವರ್ಯರ(ಸ) ಈ ಕೆಳಗಿನ ವಚನಗಳಿಂದ ತಿಳಿಯಬಹುದು.

ಸುಫ್ಯಾನ್ ಬಿನ್ ಅಬ್ದುಲ್ಲಾ(ರ) ಹೇಳುತ್ತಾರೆ, ನಾನು ಪ್ರವಾದಿವರ್ಯರ(ಸ) ಬಳಿ 'ನನಗೆ ಸದಾ ಬಿಗಿ ಹಿಡಿದಿಟ್ಟುಕೊಳ್ಳುವಂತಹ ಒಂದು ಮಾತನ್ನು ತಿಳಿಸಿ' ಎಂದು ಹೇಳಿದೆ. ಅದಕ್ಕೆ ಪ್ರವಾದಿವರ್ಯರು(ಸ) ''ನೀನು ಅಲ್ಲಾಹನನ್ನು ಆರಾಧ್ಯನೆಂದು ಹೇಳು ಮತ್ತು ಅದರ ಮೇಲೆ ಸ್ಥಿರವಾಗಿರು.'' ತರುವಾಯ ನಾನು 'ಪ್ರವಾದಿಗಳೇ! ನಿಮ್ಮ ವಿಚಾರದಲ್ಲಿ ಯಾವ ವಸ್ತು ನನಗೆ ಹೆಚ್ಚು ಅಪಾಯಕಾರಿಯಾಗಿದೆ?' ಎಂದು ಕೇಳಿದೆ. ಅದಕ್ಕೆ ಪ್ರವಾದಿವರ್ಯರು(ಸ) ''ತನ್ನ ನಾಲಗೆಯನ್ನು ಹಿಡಿದು ಇದು'' ಎಂದರು.

ಪ್ರವಾದಿ(ಸ) ಹೇಳಿದರು, ''ಮನುಷ್ಯನು ತನ್ನ ನಾಲಗೆಯಿಂದ ಅದರ ನಷ್ಟದ ಪರಿವೆಯಿಲ್ಲದೇ ಒಂದು ಮಾತನ್ನು ಹೊರಡಿಸುತ್ತಾನೆ, ಆದರೆ ಆ ಮಾತಿನಿಂದಾಗಿ ಅವನು ಪೂರ್ವ ಪಶ್ಚಿಮಗಳ ನಡುವಿನ ಅಂತರದಷ್ಟು ದೂರ ನರಕದಲ್ಲಿ ಬೀಳುತ್ತಾನೆ.''

**(ವರದಿ: ಅಬೂ ಹುರೈರ(ರ)-ಮುಸ್ಲಿಮ್)**

ಅದೇ ರೀತಿ ಇನ್ನೊಂದು ಪ್ರವಾದಿ ವಚನವನ್ನು ಅಬೂಹುರೈರ(ರ) ವರದಿ ಮಾಡುತ್ತಾರೆ.

ಪ್ರವಾದಿ(ಸ) ಹೇಳಿದರು, ''ಮನುಷ್ಯನು ತನ್ನ ಬಾಯಿಯಿಂದ ಒಂದು ಮಾತನ್ನು ಹೊರಡಿಸುತ್ತಾನೆ ಮತ್ತು ಅದಕ್ಕೆ ಯಾವ ಮಹತ್ವವನ್ನೂ ನೀಡುವುದಿಲ್ಲ, ಆದರೆ ಅದು ಎಷ್ಟು ಕೆಟ್ಟದಾಗಿರುತ್ತದೆಯೆಂದರೆ ಅದರಿಂದ ಅವನು 70 ವರ್ಷಗಳ ಅಂತರದ ವರೆಗೆ ಅಗ್ನಿಯಲ್ಲಿ ಬೀಳುತ್ತಾನೆ.'' (ತಿರ್ಮಿದಿ)

ಬಿಲಾಲ್ ಬಿನ್ ಹಾರಿಸ್(ರ) ವರದಿ ಮಾಡಿರುವ ಇನ್ನೊಂದು ಪ್ರವಾದಿ ವಚನ ಹೀಗಿದೆ:–

ಪ್ರವಾದಿ(ಸ) ಹೀಗೆ ಹೇಳಿದರು, ''ದಾಸನು ಅಲ್ಲಾಹನ ಸಂಪ್ರೀತಿಯ ಮಾತೊಂದನ್ನು ಆಡುತ್ತಾನೆ. ಆದರೆ ಅವನಿಗೆ ಅದರ ಮಹತ್ವ ತಿಳಿದಿರುವುದಿಲ್ಲ, ಆದರೆ ಅದರಿಂದಾಗಿ ಅಲ್ಲಾಹನು ಪುನುರುತ್ಥಾನ ದಿನದ ತನ್ನ ಭೇಟಿಯವರೆಗೆ ಆ ದಾಸನಿಗಾಗಿ ತನ್ನ ಸಂಪ್ರೀತಿಯನ್ನು ಬರೆದು ಬಿಡುತ್ತಾನೆ. ಅದೇ ರೀತಿ ದಾಸನು ಅಲ್ಲಾಹನ ಕ್ರೋಧದ ಮಾತೊಂದನ್ನಾಡುತ್ತಾನೆ. ಆದರೆ ಅವನಿಗೆ ಅದರ ಪರಿವೆಯಿರುವುದಿಲ್ಲ, ಆದರೆ ಅದರಿಂದಾಗಿ ಅಲ್ಲಾಹನು ಪುನರುತ್ಥಾನದ ದಿನದ ವರೆಗೆ ಅವನಿಗಾಗಿ ತನ್ನ ಕ್ರೋಧವನ್ನು ಬರೆದುಬಿಡುತ್ತಾನೆ.''

(ಮುಅತ್ತಾ)

ಇನ್ನೊಂದು ಪ್ರವಾದಿ ವಚನವನ್ನು ಅಬೂಹುರೈರರು(ರ) ವರದಿ ಮಾಡಿದ್ದಾರೆ.

ಮನುಷ್ಯನು ತನಗೆ ತಿಳಿಯದೇ ಒಂದು ಮಾತನ್ನಾಡುತ್ತಾನೆ. ಆದರೆ ಅದು ಎಷ್ಟು ಕೆಟ್ಟದಾಗಿರುತ್ತದೆಂದರೆ ಅದರಿಂದ ಅವನು ನರಕಕ್ಕೆ ಅರ್ಹನಾಗಿ ಬಿಡುತ್ತಾನೆ ಮತ್ತು ಅದೇ ರೀತಿ ಮನುಷ್ಯನು ತನಗೆ ತಿಳಿಯದೇ ಒಂದು ಮಾತನ್ನಾಡುತ್ತಾನೆ. ಅದು ಎಷ್ಟು ಒಳ್ಳೆಯದಾಗಿರುತ್ತದೆಂದರೆ ಅದರಿಂದ ಅವನು ಸ್ವರ್ಗಕ್ಕೆ ಅರ್ಹನಾಗಿ ಬಿಡುತ್ತಾನೆ. (ಮುಅತ್ತಾ)

ಈ ಮೇಲಿನ ಪ್ರವಾದಿ ವಚನಗಳಿಂದ ತಿಳಿದು ಬರುವುದೇನೆಂದರೆ ನಮ್ಮ ನಾಲಗೆಯಿಂದ ಹೊರಡುವ ಮಾತುಗಳು ತುಂಬಾ ಗಂಭೀರ ಪರಿಣಾಮ ಬೀರುತ್ತವೆ. ನಾಲಗೆಯ ಕೆಡುಕು ಇಡೀ ದೇಹದ ಕೆಡುಕಿಗೆ ಕಾರಣವಾಗುತ್ತದೆ. ಹೀಗಾಗಿ ಮಾತನಾಡುವಾಗ ಯೋಚಿಸದೆ ಮಾತನಾಡಬಾರದು.

ಪ್ರವಾದಿ(ಸ) ಹೇಳುತ್ತಾರೆ.

''ಪ್ರತಿ ದಿನ ಬೆಳಿಗ್ಗೆ ಮನುಷ್ಯನ ದೇಹದ ಇತರ ಎಲ್ಲಾ ಅಂಗಗಳು ಅಸಹಾಯಕರಾಗಿ ನಾಲಗೆಯನ್ನು ಈ ರೀತಿಯಾಗಿ ಬೇಡಿಕೊಳ್ಳುತ್ತವೆ.

ನಮ್ಮ ವಿಷಯದಲ್ಲಿ ಅಲ್ಲಾಹನಲ್ಲಿ ಭಯಪಡು, ಏಕೆಂದರೆ ನೀನು ಸರಿಯಾಗಿರುವುದರಲ್ಲಿ ನಮ್ಮೆಲ್ಲರ ಒಳಿತಿದೆ, ಒಂದು ವೇಳೆ ನೀನು ತಪ್ಪಿ ನಡೆದರೆ, ಅದರ ನಷ್ಟ ನಾವೂ ಭರಿಸಬೇಕಾಗುತ್ತದೆ.'' (ತಿರ್ಮಿದಿ)

ಹಝ್ರತ್ ಅಬೂ ಅಯ್ಯೂಬ್‌ರು(ರ) ವರದಿ ಮಾಡಿರುತ್ತಾರೆ. ಒಬ್ಬ ವ್ಯಕ್ತಿಯು ಪ್ರವಾದಿವರ್ಯರ(ಸ) ಬಳಿ ಬಂದು 'ನನಗೆ ಉಪದೇಶಿಸಿರಿ. ಆದರೆ ಆ ಮಾತು ಚಿಕ್ಕದಾಗಿರಬೇಕು' ಎಂದು ಕೇಳಿಕೊಂಡನು. ಪ್ರವಾದಿವರ್ಯರು(ಸ) ''ನೀನು ನಮಾಝ್‌ಗಾಗಿ ನಿಂತಾಗ ಅದು ನಿನ್ನ ಜೀವನದ ಕೊನೆಯ ನಮಾಝ್ ಎಂಬಂತೆ ನಿರ್ವಹಿಸು, ಮಾತನಾಡಿ ನಂತರ ಜನರ ಬಳಿ ಪಶ್ಚಾತ್ತಾಪಕ್ಕೀಡಾಗುವ ಮಾತುಗಳನ್ನು ನಾಲಗೆಯಿಂದ ಹೊರಡಿಸಬೇಡ ಮತ್ತು ಜನರ ಬಳಿ ಏನಿದೆಯೋ ಅದರಿಂದ ಸಂಪೂರ್ಣವಾಗಿ ನಿರಪೇಕ್ಷನಾಗಿ ಬಿಡು.'' (ಇಬ್ನು ಮಾಜಃ)

ಹಝ್ರತ್ ಉಖ್ಬಾ ಬಿನ್ ಆಮಿರ್(ರ) ಹೇಳುತ್ತಾರೆ, ನಾನು ಪ್ರವಾದಿವರ್ಯರಲ್ಲಿ(ಸ) ಮುಕ್ತಿ ಹೇಗೆ ಪ್ರಾಪ್ತವಾಗುವುದೆಂದು ಕೇಳಿದೆ. ಆಗ ಪ್ರವಾದಿವರ್ಯರು(ಸ) ''ನೀನು ನಿನ್ನ ನಾಲಗೆಯನ್ನು ನಿಯಂತ್ರಿಸು ಮತ್ತು ನಿನ್ನ ಮನೆ ನಿನಗಾಗಿ ವಿಶಾಲವಾಗಿರಲಿ ಹಾಗೂ ನೀನು ನಿನ್ನ ಪಾಪಗಳ ಮೇಲೆ ಕಣ್ಣೀರಿಡು'' ಎಂದರು. (ತಿರ್ಮಿದಿ)

ಹಝ್ರತ್ ಆಯಿಶಾರು(ರ) ಇಶಾ ನಮಾಝ್‌ನ ನಂತರ ತನ್ನ ಕೆಲವು ಸಂಬಂಧಿಕರಿಗೆ ಈ ರೀತಿ ಹೇಳಿ ಕಳುಹಿಸುತ್ತಿದ್ದರು. 'ಈಗಲಾದರೂ ನೀವು ನಿಮ್ಮ ಕರ್ಮಗಳನ್ನು ಬರೆದಿಡುತ್ತಿರುವ ದೇವಚರರಿಗೆ ವಿಶ್ರಾಂತಿ ನೀಡುವುದಿಲ್ಲವೇ?' (ಮುಅತ್ತಾ)

ಅಂದರೆ ಈಗಲಾದರೂ ಮಲಗಿ ಮತ್ತು ನಿಮ್ಮ ಕರ್ಮಗಳನ್ನು ಬರೆಯುತ್ತಿರುವ ದೇವಚರರಿಗೆ ವಿಶ್ರಾಂತಿ ಪಡೆಯಲು ಅವಕಾಶ ನೀಡಿ.

ಒಮ್ಮೆ ಉಮರ್‌ರು(ರ) ಅಬೂಬಕರ್‌ರ(ರ) ಬಳಿ ಬಂದಾಗ ಅವರು ತನ್ನ ನಾಲಗೆಯನ್ನು ಎಳೆಯುತ್ತಿದ್ದುದನ್ನು ಕಂಡು ಉಮರ್‌ರು(ರ), ನಿಲ್ಲಿ, ಅಲ್ಲಾಹ್ ನಿಮಗೆ ಮೋಕ್ಷ ನೀಡಲಿ, ನೀವೇನು ಮಾಡುತ್ತಿರುವಿರಿ ಎಂದು ಕೇಳಿದರು.

ಅದಕ್ಕೆ ಅಬೂಬಕರ್‌ರು(ರ) ಇದು ನನ್ನನ್ನು ನಷ್ಟಕ್ಕೀಡು ಮಾಡಿತು ಎಂದರು.
(ವರದಿ:ಅಸ್ಲಮ್ ಅದಿ-ಮುಅತ್ತಾ)

ಮೌಲಾನಾ ಮುಫ್ತಿ ಮುಹಮ್ಮದ್ ಶಫೀ ಸಾಹೆಬ್ ಅನವಶ್ಯಕ ಮಾತುಗಳಿಂದಾಗುವ ಅನಾಹುತಗಳ ಬಗ್ಗೆ ಎಚ್ಚರಿಸುತ್ತಾ ಹೀಗೆ ಹೇಳುತ್ತಾರೆ,

ಮನುಷ್ಯನು ಮಾತಾಡುವ ಎಲ್ಲಾ ಮಾತು ಮತ್ತು ಕರ್ಮಗಳಲ್ಲಿ ಮೂರು ವಿಧಗಳಿವೆ.

ಪ್ರಯೋಜನಕಾರಿ: ದೀನ್ ಮತ್ತು ಇಹಲೋಕದ ಒಳಿತಿರುವಂತಹದು.

ನಷ್ಟಕಾರಕ: ದೀನ್ ಮತ್ತು ಇಹಲೋಕದ ನಷ್ಟವಿರುವಂತಹದು.

ಪ್ರಯೋಜನವಿಲ್ಲದ್ದೂ ನಷ್ಟವೂ ಇಲ್ಲದ್ದು: ನಷ್ಟವೋ ಪ್ರಯೋಜನಕಾರಿಯೋ ಆಗದಿರುವಂತಹದ್ದು.

ಈ ಮೂರನೆಯ ವಿಧವನ್ನು ಹದೀಸ್‌ಗಳಲ್ಲಿ ಅನವಶ್ಯಕವೆಂದು ಹೇಳಲಾಗಿದೆ.

ಆದರೆ ಸ್ವಲ್ಪ ಯೋಚಿಸಿದಾಗ ಈ 3ನೆಯ ವಿಧವೂ ಸಹ 2ನೆಯ ವಿಧದಲ್ಲಿ ಸೇರಿದೆ ಎಂದಾಗುತ್ತದೆ. ಏಕೆಂದರೆ ಈ ರೀತಿ ಅನವಶ್ಯಕ ಮಾತುಗಳಲ್ಲಿ ವ್ಯಯಿಸಿದಂತಹ ಸಮಯದಲ್ಲಿ ಒಂದು ಸಾರಿಯಾದರೂ ಸುಬ್‌ಹಾನಲ್ಲಾಹ್ ಹೇಳಿದ್ದೇ ಆಗಿದ್ದರೆ ಅದು ನಮ್ಮ ಕರ್ಮಗಳ ತಕ್ಕಡಿಯ ಅರ್ಧದಷ್ಟು ತುಂಬುತ್ತಿತ್ತು. ಇತರ ಯಾವುದೇ ಕೆಲಸ ಮಾಡಿದ್ದರೂ ನಮ್ಮ ಪಾಪದ ಪರಿಹಾರ ಮತ್ತು ಪರಲೋಕದಲ್ಲಿ ನಮ್ಮ ಮುಕ್ತಿಗೆ ಕಾರಣವಾಗಬಹುದಾಗಿತ್ತು ಅಥವಾ ಇಹಲೋಕದ ಅವಶ್ಯಕತೆಗಳ ಚಿಂತೆಯಿಂದ ಮುಕ್ತವಾಗಬಹುದಿತ್ತು.

ಈ ರೀತಿ ಅಮೂಲ್ಯ ಸಮಯವನ್ನು ಅನವಶ್ಯಕ ಕೆಲಸ ಅಥವಾ ಮಾತುಗಳಲ್ಲಿ ವ್ಯಯಿಸುವುದರ ಉಪಮೆಯು ಒಬ್ಬ ವ್ಯಕ್ತಿಗೆ ಚಿನ್ನ, ಬೆಳ್ಳಿ ಮತ್ತು ವಜ್ರಗಳ ಖಜಾನೆ ಅಥವಾ ಕಲ್ಲು ಮಣ್ಣುಗಳಲ್ಲಿ ಯಾವುದಾದರೂ ಆಯ್ಕೆ ಮಾಡಿಕೊಳ್ಳುವ ಅವಕಾಶ ನೀಡಿದಾಗ, ಸ್ಪಷ್ಟ ನಷ್ಟದ ಅರಿವಿದ್ದರೂ ಕಲ್ಲು ಮಣ್ಣುಗಳನ್ನೇ ಆಯ್ಕೆ ಮಾಡಿಕೊಳ್ಳುವ ಹಾಗಿದೆ. **(ಗುನಾಹ್ ಬೆ ಲಝ್ಜುತ್; ಮುಫ್ತಿ ಮುಹಮ್ಮದ್ ಶಫಿ)**

ಲಗಾಮಿಲ್ಲದ ನಾಲಗೆಯ ನಷ್ಟಗಳ ಕುರಿತು ಕೆಲವು ಸಜ್ಜನರ ಹೇಳಿಕೆಗಳು ಈ ರೀತಿಯಾಗಿವೆ.

'ಮನುಷ್ಯನ (ಅನಗತ್ಯ) ಮಾತುಕತೆಯೇ ಎಲ್ಲಾ ಸಂಕಷ್ಟಗಳ ಮೂಲವಾಗಿದೆ.'

–ಅಬೂಬಕರ್(ರ)

'ನಾಲಗೆಯ ಜಾರುವಿಕೆ ಹೆಜ್ಜೆಗಳ ಜಾರುವಿಕೆಗಿಂತ ಹಾನಿಕರವಾಗಿದೆ.'–ಉಸ್ಮಾನ್ (ರ)

'ನಾಲಗೆಯು ಒಂದು ಕ್ರೂರ ಪ್ರಾಣಿಯಿದ್ದಂತೆ, ಬಿಟ್ಟು ಬಿಟ್ಟರೆ ತಿಂದು ಹಾಕುವುದು.'

–ಅಲಿ(ರ)

ಅಲಿಯವರು(ರ) ಇನ್ನೊಂದು ಕಡೆ ಹೀಗೆ ಹೇಳುತ್ತಾರೆ, 'ನಾಲಗೆಯ ಅತಿಕ್ರಮಣ ಆತ್ಮದ ಅಪಮಾನವಾಗಿದೆ.'

ನಾಲಗೆಯನ್ನು ಯಾವ ಪರಿವೆಯಿಲ್ಲದೆ ಬಳಸುವುದು ಇಹಲೋಕ ಮತ್ತು ಪರಲೋಕ ಎರಡರಲ್ಲೂ ನಷ್ಟಕ್ಕೀಡು ಮಾಡುತ್ತದೆ. ಹಲವು ಬಾರಿ ನಾಲಗೆಯ ದುರ್ಬಳಕೆಯಿಂದಾಗಿ ಮನುಷ್ಯನು ವಿವಿಧ ರೀತಿಯ ಸಂಕಷ್ಟಗಳನ್ನು ತನ್ನತ್ತ ಸೆಳೆದುಕೊಳ್ಳುತ್ತಾನೆ ಮತ್ತು ತನಗೆ ದೊರಕಿರುವ ಅಥವಾ ದೊರಕಲಿರುವ ಅನುಗ್ರಹಗಳಿಂದ ವಂಚಿತನಾಗುತ್ತಾನೆ.

ಹಝ್ರತ್ ಅಲಿಯವರು(ರ) ಹೇಳುತ್ತಾರೆ,

'ಶಬ್ದ(ಮಾತು)ಗಳಲ್ಲಿ ಹೆಚ್ಚಿನವು ಅನುಗ್ರಹಗಳನ್ನು ಕಸಿದುಕೊಳ್ಳುತ್ತವೆ.'

ಅವರ ಇನ್ನೊಂದು ಹೇಳಿಕೆ ಈ ರೀತಿ ಇದೆ.

'ಯಾವ ಮನುಷ್ಯನು ತನ್ನ ನಾಲಗೆಯಿಂದ ಆಳಲ್ಪಡುತ್ತಾನೋ ಅದು ಅವನ ವಿನಾಶ ಮತ್ತು ಸಾವಿಗೆ ಕಾರಣವಾಗುತ್ತದೆ.'

ಖ್ವಾಜಾ ಹಸನ್ ಬಸ್ರಿ(ರ) ಹೀಗೆ ಹೇಳುತ್ತಾರೆ.

'ಬುದ್ಧಿವಂತನ ನಾಲಗೆ ಅವನ ಹೃದಯದ ಹಿಂದೆ ಇರುತ್ತದೆ. ಅವನು ಏನಾದರೂ ಹೇಳುವ ಮುಂಚೆ ಹೃದಯದೊಂದಿಗೆ ಸಮಾಲೋಚಿಸುತ್ತಾನೆ. ಆ ಮಾತು ಅವನಿಗೆ ಲಾಭದಾಯಕವಾಗಿದ್ದರೆ ಮಾತ್ರ ಹೇಳುತ್ತಾನೆ. ಅದೇ ರೀತಿ ಮೂರ್ಖನ ಹೃದಯವು ಅವನ ನಾಲಗೆಯ ತುದಿಯಲ್ಲಿರುತ್ತದೆ. ಅವನು ಮಾತಾಡುವ ಮುಂಚೆ ಹೃದಯದೊಂದಿಗೆ ಸಮಾಲೋಚಿಸದೆ ಬಾಯಿಗೆ ಬಂದದ್ದನ್ನು ಹೇಳುತ್ತಾ ಹೋಗುತ್ತಾನೆ.'

ಒಟ್ಟಿನಲ್ಲಿ ನಾಲಗೆ ನಿಯಂತ್ರಣ ಮತ್ತು ಅದರ ಸದ್ಬಳಕೆಯಿಂದಾಗಿ ಸತ್ಯ ವಿಶ್ವಾಸಿಯು ಹಲವಾರು ಪಾಪಗಳಿಂದ ದೂರ ಉಳಿಯುತ್ತಾನಲ್ಲದೆ ಉತ್ತಮ ಪ್ರತಿಫಲಕ್ಕೆ ಅರ್ಹನಾಗುತ್ತಾನೆ.

ನಂತರದ ಪುಟಗಳಲ್ಲಿ ನಾಲಗೆಯಿಂದಾಗುವ ವಿವಿಧ ರೀತಿಯ ಕೆಡುಕುಗಳ ಕುರಿತ ಕುರ್‌ಆನ್ ಸೂಕ್ತಗಳು ಮತ್ತು ಪ್ರವಾದಿ ವಚನಗಳನ್ನು ನೀಡಲಾಗಿದೆ.

*****

# ಸುಳ್ಳು

''....ನೀವಿನ್ನು ವಿಗ್ರಹಗಳ ಮಾಲಿನ್ಯದಿಂದ ದೂರವಿರಿ. ಅಸತ್ಯ ಮಾತುಗಳಿಂದಲೂ ದೂರವಿರಿ.'' (ಪವಿತ್ರ ಕುರ್‌ಆನ್, 22:30)

''....ಮಿತಿ ಮೀರುವಾತನಿಗೆ ಮತ್ತು ಸುಳ್ಳುಗಾರನಿಗೆ ಅಲ್ಲಾಹನು ಸನ್ಮಾರ್ಗದರ್ಶನ ನೀಡುವುದಿಲ್ಲ.'' (ಪವಿತ್ರ ಕುರ್‌ಆನ್, 40:28)

ಪ್ರವಾದಿ(ಸ) ಹೀಗೆ ಹೇಳಿರುವರು.

''ಸತ್ಯವನ್ನು ಅನುಸರಿಸಿರಿ. ಸತ್ಯವು ಒಳಿತಿನೆಡೆಗೆ ಒಯ್ಯುತ್ತದೆ. ಒಳಿತು ಸ್ವರ್ಗದೆಡೆಗೆ ಒಯ್ಯುತ್ತದೆ. ಮನುಷ್ಯನು ಸತ್ಯವನ್ನೇ ಹೇಳುತ್ತಾ, ಸತ್ಯವನ್ನೇ ಅನುಸರಿಸುತ್ತಾ ಇದ್ದರೆ ಕೊನೆಗೊಮ್ಮೆ ಅಲ್ಲಾಹನ ಬಳಿ ಅವನನ್ನು 'ಸಿದ್ದೀಕ್'(ಪರಮ ಸತ್ಯವಂತ) ಎಂದು ಬರೆದಿಡಲಾಗುತ್ತದೆ. ಸುಳ್ಳಿನಿಂದ ದೂರವಿರಿ, ಸುಳ್ಳು ಕೆಡುಕಿನೆಡೆಗೆ ಕೊಂಡೊಯ್ಯುತ್ತದೆ ಮತ್ತು ಕೆಡುಕು ನರಕದೆಡೆಗೆ ಕೊಂಡೊಯ್ಯುತ್ತದೆ. ಮನುಷ್ಯನು ಸುಳ್ಳನ್ನೇ ಹೇಳುತ್ತಲಿದ್ದರೆ ಮತ್ತು ಸುಳ್ಳನ್ನೇ ಅನುಸರಿಸುತ್ತಲಿದ್ದರೆ ಕೊನೆಗೊಮ್ಮೆ ಅಲ್ಲಾಹನ ಬಳಿ ಅವನನ್ನು ಪರಮ ಸುಳ್ಳುಗಾರ ಎಂದು ಬರೆದಿಡಲಾಗುತ್ತದೆ. (ಬುಖಾರಿ)

ಸಹೀಹುಲ್ ಬುಖಾರಿಯಲ್ಲಿ ಅಬ್ದುಲ್ಲಾ ಬಿನ್ ಅಬ್ಬಾಸ್‌ರು(ರ) ವರದಿ ಮಾಡಿರುವ ಒಂದು ಕಥೆ ಬಂದಿದೆ. ಇದು ಅಜ್ಞಾನ ಕಾಲದ ಕಥೆಯಾಗಿದ್ದರೂ ಸುಳ್ಳು ಆಣೆ ಮಾಡುವುದರಿಂದಾಗುವ ಪರಿಣಾಮದ ಕುರಿತು ಇದರಲ್ಲಿ ವಿವರಿಸಲಾಗಿದೆ.

ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಹೇಳುತ್ತಾರೆ, ಬನೂ ಹಾಶಿಮ್ ಗೋತ್ರದ ಒಬ್ಬ ವ್ಯಕ್ತಿಯನ್ನು ಕುರೈಶ್‌ನ ಇನ್ನೊಂದು ಗೋತ್ರದ ವ್ಯಕ್ತಿಯು ಕೆಲಸಕ್ಕಾಗಿ ನೇಮಿಸಿಕೊಂಡಿದ್ದನು. ಅವನು ತನ್ನ ಯಜಮಾನ ಮತ್ತು ಒಂಟೆಗಳೊಂದಿಗೆ ಹೋಗುತ್ತಿರುವಾಗ ಬನೂ ಹಾಶಿಮ್ ಗೋತ್ರದ ಇನ್ನೊಬ್ಬ ವ್ಯಕ್ತಿ ಅಲ್ಲಿಂದ ಹೊರಡುತ್ತಿದ್ದ, ಅವನು ತನ್ನ ಒಂಟೆಯನ್ನು ಕಟ್ಟಲಿಕ್ಕಾಗಿ ಆ ಹಾಶ್ಮಿ ಕೂಲಿಯಿಂದ ಒಂದು ಹಗ್ಗ ಕೇಳಿದನು. ಹಾಶ್ಮಿ ಕೂಲಿಯಾಳು ತನ್ನ ಯಜಮಾನನ ಅಪ್ಪಣೆ ಪಡೆಯದೆ ಒಂಟೆ ಕಟ್ಟಲು ಹಗ್ಗ ನೀಡಿದನು. ಅವರು ಮುಂದೆ ಸಾಗಿದಾಗ ಒಂದು ಕಡೆ ರಾತ್ರಿ ಕಳೆಯಲು ಬಿಡಾರ ಹೂಡಿದರು. ಎಲ್ಲಾ ಒಂಟೆಗಳನ್ನು ಕಟ್ಟಲಾಯಿತು. ಆದರೆ ಒಂದು ಒಂಟೆ ಮಾತ್ರ ಹಗ್ಗವಿಲ್ಲದ ಕಾರಣ ಹಾಗೆಯೇ ಉಳಿಯಿತು. ಯಜಮಾನನು

ಆ ಒಂಟೆ ಏಕೆ ಕಟ್ಟಲಾಗಿಲ್ಲವೆಂದು ಕೇಳಿದಾಗ, ಆ ಕೂಲಿಯಾಳು ಅದಕ್ಕೆ ಹಗ್ಗವಿಲ್ಲವೆಂದು ಉತ್ತರಿಸಿದ. ಅವನು ಆ ಹಗ್ಗವನ್ನು ಇನ್ನೊಬ್ಬ ಹಾಶ್ಮಿಗೆ ನೀಡಿದ್ದಾನೆಂದು ಗೊತ್ತಾದಾಗ ಯಜಮಾನನು ಕೆಲಸದಾಳನ್ನು ತನ್ನ ದೊಣ್ಣೆಯಿಂದ ಹೊಡೆದನು. ಇದರಿಂದಾಗಿ ಆ ಬಡ ಕೆಲಸದಾಳು ತೀವ್ರವಾಗಿ ಗಾಯಗೊಂಡು ಬಿದ್ದನು. ಅಲ್ಲಿಂದ ಯಮನ್‌ನ ಒಬ್ಬ ವ್ಯಕ್ತಿ ಹಾದು ಹೋಗುತ್ತಿದ್ದ, ಅವನನ್ನು ಕರೆದು ಆ ಕೂಲಿಯಾಳು ನೀನು ನನ್ನ ಒಂದು ಸಂದೇಶವನ್ನು ನನ್ನ ಗೋತ್ರದವರಿಗೆ ತಲುಪಿಸುವೆಯಾ? ಎಂದು ಕೇಳಿದನು. ಅವನು ಅದಕ್ಕೆ ಒಪ್ಪಿಕೊಂಡಾಗ ಆ ಕೆಲಸದಾಳು ನೀನು ಹಜ್ಜ್‌ಗಾಗಿ ಹೋದಾಗ ನನ್ನ ಗೋತ್ರದವರಾದ ಕುರೈಶ್ ಮತ್ತು ಬನೂ ಹಾಶಿಮ್‌ರಲ್ಲಿ ಅಬೂತಾಲಿಬ್ ಎಂಬವರನ್ನು ಭೇಟಿ ಮಾಡಿ ನನ್ನ ಯಜಮಾನನು ನನ್ನನ್ನು ಒಂದು ಹಗ್ಗಕ್ಕಾಗಿ ಸಾಯಿಸಿಬಿಟ್ಟನೆಂದು ತಿಳಿಸು ಎಂದು ಹೇಳುತ್ತಾ ಮರಣ ಹೊಂದಿದನು.

ಅವನ ಯಜಮಾನ ಮಕ್ಕಾಗೆ ಬಂದಾಗ ಅಬೂತಾಲಿಬ್ ನನ್ನ ಗೋತ್ರದ ವ್ಯಕ್ತಿ ಹೇಗಿದ್ದಾನೆಂದು ಕೇಳುತ್ತಾರೆ. ಯಜಮಾನನು ಅವನು ತುಂಬಾ ಅನಾರೋಗ್ಯಕ್ಕೀಡಾಗಿದ್ದ ನಾನು ಅವನನ್ನು ಒಳ್ಳೆಯ ಚಿಕಿತ್ಸೆ ನೀಡಲು ಯತ್ನಿಸಿದೆ. ಆದರೆ ಅವನು ಉಳಿಯಲಿಲ್ಲ, ಆಗ ನಾನು ಅವನ ಅಂತಿಮ ಸಂಸ್ಕಾರ ನೆರವೇರಿಸಿದೆ ಎಂದನು.

ಸ್ವಲ್ಪ ಸಮಯದಲ್ಲೇ ಆ ಕೆಲಸದಾಳು ಸಂದೇಶ ಕೊಟ್ಟು ಕಳುಹಿಸಿದ ವ್ಯಕ್ತಿ ಅಲ್ಲಿಗೆ ತಲುಪಿದ ಮತ್ತು ಅಬೂತಾಲಿಬ್‌ರನ್ನು ಭೇಟಿ ಮಾಡಿ ಒಂದು ಹಗ್ಗಕ್ಕಾಗಿ ನಿಮ್ಮ ಗೋತ್ರದ ವ್ಯಕ್ತಿಯನ್ನು ಕೊಲ್ಲಲಾಗಿದೆ ಎಂದು ತಿಳಿಸಿದ.

ಈಗ ಅಬೂತಾಲಿಬ್‌ರು ಆ ಕೂಲಿಯಾಳನ್ನು ಕೊಂದ ಯಜಮಾನನ ಬಳಿ ಹೋಗಿ ಮೂರು ಪ್ರಸ್ತಾಪಗಳನ್ನಿಟ್ಟು, ಯಾವುದಾದರೂ ಒಂದನ್ನು ಸ್ವೀಕರಿಸುವಂತೆ ಹೇಳಿದರು.

1. ಅವನ ಸಾವಿನ ಬದಲಾಗಿ ಪರಿಹಾರ ಧನವಾಗಿ 100 ಒಂಟೆಗಳನ್ನು ನೀಡುವುದು.

2. ನಿಮ್ಮ ಗೋತ್ರದ 50 ಜನ ನೀನು ಈ ಕೊಲೆ ಮಾಡಿಲ್ಲವೆಂದು ಆಣೆ ಹಾಕಿ ಹೇಳಬೇಕು.

3. ಈ ಕೊಲೆಯ ಬದಲಾಗಿ ನಾವು ನಿನ್ನನ್ನು ಸಹ ಕೊಲೆ ಮಾಡುವೆವು.

ಆ ಯಜಮಾನನು ತನ್ನ ಗೋತ್ರದವರತ್ತ ಮರಳಿ ವಿಷಯ ತಿಳಿಸಿದಾಗ ಅವರು ಸುಳ್ಳು ಆಣೆ ಹಾಕಲು ಸಿದ್ಧರಾದರು.

ಆಗ ಬನೂ ಹಾಶಿಮ್ ಗೋತ್ರಕ್ಕೆ ಸೇರಿದ ಆದರೆ ಕೊಲೆ ಮಾಡಿದ ಯಜಮಾನನ ಗೋತ್ರದಲ್ಲಿ ವರಿಸಲ್ಪಟ್ಟಿರುವಂಥ ಒಬ್ಬ ಮಹಿಳೆಯು ತನ್ನ ಮಗನನ್ನು ಈ ಆಣೆಯಲ್ಲಿ ಪಾಲ್ಗೊಳ್ಳದಿರುವಂತೆ ವಿನಾಯಿತಿ ನೀಡಬೇಕೆಂದು ಕೇಳಿಕೊಂಡಳು. ಇನ್ನೊಬ್ಬ ವ್ಯಕ್ತಿಯು

ಅಬೂತಾಲಿಬ್‌ರ ಬಳಿ ಬಂದು ನೀವು 100 ಒಂಟೆಗಳ ಬದಲಾಗಿ 50 ಜನರನ್ನು ಆಣೆ ಮಾಡಲು ಕೇಳಿದ್ದೀರಿ. ಅಂದರೆ ಒಬ್ಬ ವ್ಯಕ್ತಿಗೆ 2 ಒಂಟೆಗಳು ಹೀಗಾಗಿ ನನ್ನ ಕಡೆಯಿಂದ ಈ ಎರಡು ಒಂಟೆಗಳನ್ನು ಸ್ವೀಕರಿಸಿ ಮತ್ತು ನನ್ನನ್ನು ಸಹ ಆಣೆಯಿಂದ ವಿನಾಯಿತಿ ನೀಡಬೇಕೆಂದು ಕೇಳಿಕೊಂಡನು. ಅಬೂತಾಲಿಬ್‌ರು ಆ ಮಹಿಳೆಯ ಮಗ ಮತ್ತು ಒಂಟೆಗಳನ್ನು ನೀಡಿದ ವ್ಯಕ್ತಿಗೆ ಆಣೆಹಾಕುವುದರಿಂದ ವಿನಾಯ್ತಿ ನೀಡಿದರು. ಉಳಿದ 48 ಜನರು ಆ ಯಜಮಾನನು ತನ್ನ ಕೂಲಿಯಾಳನ್ನು ಕೊಂದಿಲ್ಲವೆಂದು ಸುಳ್ಳು ಆಣೆ ಹಾಕಿದರು.

ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಈ ಕಥೆಯನ್ನು ಮುಗಿಸಿ ಹೀಗೆ ಹೇಳಿದರು: 'ಅಲ್ಲಾಹನಾಣೆ, ಆಣೆ ಮಾಡಿದ 1 ವರ್ಷದ ಒಳಗೆ ಆ 48 ಜನರಲ್ಲಿ ಯಾರೊಬ್ಬರೂ ಬದುಕುಳಿಯಲಿಲ್ಲ.'

ಹಝ್ರತ್ ಅಬೂಬಕರ್(ರ) ಹೇಳುತ್ತಾರೆ, ಒಮ್ಮೆ ಪ್ರವಾದಿವರ್ಯರು(ಸ) ನಾನು ನಿಮಗೆ ಅತ್ಯಂತ ದೊಡ್ಡ ಪಾಪಗಳ ಕುರಿತು ತಿಳಿಸಬೇಡವೆ? ಎಂದು ಮೂರು ಸಾರಿ ಕೇಳಿದರು, ಸಹಾಬಿಗಳು ಖಂಡಿತವಾಗಿ ತಿಳಿಸಿ ಎಂದಾಗ, ಪ್ರವಾದಿವರ್ಯರು(ಸ) ಅಲ್ಲಾಹನೊಂದಿಗೆ ಇತರರನ್ನು ಸಹಭಾಗಿಯನ್ನಾಗಿ ಮಾಡುವುದು, ತಂದೆ-ತಾಯಿಗಳ ಆಜ್ಞೋಲ್ಲಂಘನೆ ಮಾಡುವುದು, (ಗೋಡೆಗೆ ಒರಗಿ ಕುಳಿತಿದ್ದ ಪ್ರವಾದಿವರ್ಯರು(ಸ) ನೇರವಾಗಿ ಕುಳಿತು) ಎಚ್ಚರಿಕೆ! ಸುಳ್ಳಾಡುವುದು ಸಹ ದೊಡ್ಡ ಪಾಪವಾಗಿದೆ. ತರುವಾಯ ಪ್ರವಾದಿವರ್ಯರು(ಸ) ಇದೇ ಮಾತನ್ನು ಪುನರಾವರ್ತಿಸುತ್ತಲೇ ಇದ್ದರು. ಎಲ್ಲಿಯವರೆಗೆಂದರೆ ಪ್ರವಾದಿವರ್ಯರು(ಸ) ಸುಮ್ಮನಾದರೆ ಒಳ್ಳೆಯದಾಗಿತ್ತೆಂದು ನಾವು ನಮ್ಮ ಮನಸ್ಸಲ್ಲಿ ಹೇಳಿಕೊಂಡೆವು.'' (ಮುಸ್ಲಿಮ್)

ಒಂದು ದಿನ ಪ್ರವಾದಿವರ್ಯರು(ಸ) ಫಜ್ರ್ ನಮಾಝ್ ಮಾಡಿ ಮುಗಿಸಿದಾಗ ಎದ್ದು ನಿಂತು ಮೂರು ಸಲ ಹೀಗೆ ಹೇಳಿದರು, ಸುಳ್ಳು ಸಾಕ್ಷ್ಯವನ್ನು ನುಡಿಯುವುದು ಅಲ್ಲಾಹನ ಜೊತೆ ಇತರರನ್ನು ಆರಾಧಿಸುವುದಕ್ಕೆ ಸಮಾನವೆಂದು ಸಾರಲಾಗಿದೆ. ತರುವಾಯ ಪ್ರವಾದಿವರ್ಯರು(ಸ) (ಪುರಾವೆಗಾಗಿ) ಈ ಸೂಕ್ತ ಪಠಿಸಿದರು-

**''....ನೀವಿನ್ನು ವಿಗ್ರಹಗಳ ಮಾಲಿನ್ಯದಿಂದ ದೂರವಿರಿ. ಅಸತ್ಯ ಮಾತುಗಳಿಂದಲೂ ದೂರವಿರಿ. ಏಕನಿಷ್ಠರಾಗಿ ಅಲ್ಲಾಹನ ದಾಸರಾಗಿರಿ. ಅವನೊಂದಿಗೆ ಯಾರನ್ನೂ ಭಾಗೀದಾರನಾಗಿ ಮಾಡಬೇಡಿರಿ....''** **(ಪವಿತ್ರ ಕುರ್‌ಆನ್, 22:30-31)**

ಕೆಲವರಿಗೆ ಸಭೆ ಸಮಾರಂಭಗಳಲ್ಲಿ ಜನರ ಕೇಂದ್ರ ಬಿಂದುವಾಗುವ ಬಯಕೆ ಎಷ್ಟರ ಮಟ್ಟಿಗಿರುತ್ತದೆಂದರೆ ಅವರು ಜನರನ್ನು ನಗಿಸಲು ಇಲ್ಲ ಸಲ್ಲದ ಮಾತುಗಳನ್ನಾಡುತ್ತಾರೆ. ಈ ರೀತಿಯ ಜನರ ಬಗ್ಗೆ ಎಚ್ಚರಿಸುತ್ತಾ ಪ್ರವಾದಿವರ್ಯರು(ಸ) ಹೀಗೆ ಹೇಳಿರುವರು,

''ಜನರನ್ನು ನಗಿಸಲಿಕ್ಕಾಗಿ ಸುಳ್ಳಾಡುವವನಿಗೆ ನಾಶವಿದೆ. ಅವನಿಗೆ ನಾಶವಿದೆ. ಅವನಿಗೆ ನಾಶವಿದೆ.'' [ತಿರ್ಮಿದಿ-ಬಹಝ್ ಬಿನ್ ಹಕೀಮ್(ರ)]

ಅದೇ ರೀತಿ ಕೆಲವು ಸಲ ಮಕ್ಕಳನ್ನು ಓಲೈಸಲು ಅಥವಾ ಅವರ ಗಮನ ಬೇರೆಡೆಗೆ ಹರಿಸಲು ತಾಯಂದಿರು ಮಕ್ಕಳೊಂದಿಗೆ ಸುಳ್ಳಾಡುತ್ತಾರೆ ಮತ್ತು ಅದನ್ನು ಸುಳ್ಳೆಂದು ಪರಿಗಣಿಸುವುದಿಲ್ಲ, ಆದರೆ ಸುಳ್ಳು ಯಾವ ರೀತಿಯಲ್ಲಾದರೂ ಅದು ಸುಳ್ಳೇ ಆಗಿದೆ.

ಒಂದು ದಿನ ಪ್ರವಾದಿವರ್ಯರು(ಸ) ನಮ್ಮ ಮನೆಗೆ ಬಂದಿದ್ದರು. ನನ್ನ ತಾಯಿ ನನ್ನನ್ನು ಕೂಗಿ ಕರೆಯುತ್ತಾ 'ಇಲ್ಲಿ ಬಾ ನಿನಗೊಂದು ವಸ್ತು ಕೊಡುತ್ತೇನೆ' ಎಂದರು. ಪ್ರವಾದಿವರ್ಯರು(ಸ) ತಾಯಿಯೊಡನೆ-''ನೀವೇನು ಕೊಡಬಯಸಿದ್ದೀರಿ?'' ಎಂದು ಕೇಳಿದರು. ಅವರು ಹೇಳಿದರು, 'ನಾನು ಅವನಿಗೆ ಖರ್ಜೂರ ಕೊಡಬಯಸಿದ್ದೆ.' ಆಗ ಪ್ರವಾದಿವರ್ಯರು(ಸ) ಹೇಳಿದರು- ''ನೀವು ಅವನಿಗೆ ಏನಾದರೂ ಕೊಡದೆ ಇರುತ್ತಿದ್ದರೆ ನಿಮ್ಮ ಕರ್ಮಪತ್ರದಲ್ಲಿ ಒಂದು ಸುಳ್ಳು ಬರೆಯಲ್ಪಡುತ್ತಿತ್ತು.''

[ಅಬೂ ದಾವೂದ್, ವರದಿ: ಅಬ್ದುಲ್ಲಾ ಬಿನ್ ಆಮಿರ್(ರ)]

ಪ್ರವಾದಿವರ್ಯರು(ಸ) ಹೇಳುತ್ತಾರೆ- ''ದಾಸನು ಸುಳ್ಳು ಹೇಳುತ್ತಾನೆ. ಅದರ ದುರ್ವಾಸನೆಯಿಂದಾಗಿ ದೇವಚರನು ಒಂದು ಮೈಲಿನಷ್ಟು ದೂರವಾಗಿ ಬಿಡುತ್ತಾನೆ.''

[ತಿರ್ಮಿದಿ, ವರದಿ: ಹಝ್ರತ್ ಇಬ್ನು ಉಮರ್(ರ)]

ಅಬ್ದುಲ್ಲಾ ಬಿನ್ ಮಸ್‌ಊದ್(ರ) ಹೇಳುತ್ತಾರೆ-

''ದಾಸನು ಸುಳ್ಳು ಹೇಳಿದಾಗ ಅವನ ಹೃದಯದ ಮೇಲೆ ಒಂದು ಕಪ್ಪು ಕಲೆ ಮೂಡುತ್ತದೆ. (ಮತ್ತು ಅದು ಅಗಲವಾಗುತ್ತ ಹೋಗುತ್ತದೆ) ಎಲ್ಲಿಯವರೆಗೆಂದರೆ ಅವನ ಇಡೀ ಹೃದಯವು ಕಪ್ಪಾಗಿಬಿಡುತ್ತದೆ ಮತ್ತು ಅವನ ಹೆಸರು ಅಲ್ಲಾಹನ ಬಳಿ ಸುಳ್ಳುಗಾರರಲ್ಲಿ ಬರೆಯಲ್ಪಡುತ್ತದೆ.'' [ಮುಅತ್ತಾ, ವರದಿ: ಇಮಾಮ್ ಮಾಲಿಕ್(ರ)]

ಪ್ರವಾದಿವರ್ಯರಿಗೆ(ಸ) ಹೀಗೆ ಕೇಳಲಾಯಿತು, 'ಒಬ್ಬ ಸತ್ಯವಿಶ್ವಾಸಿಯು ಹೇಡಿಯಾಗಿರಬಹುದೇ?' ಆದಕ್ಕೆ ಅವರು ''ಹೌದು'' ಎಂದರು. 'ಸತ್ಯವಿಶ್ವಾಸಿಯು ಜಿಪುಣನಾಗಿರಬಹುದೇ?' ಎಂದಾಗ ''ಹೌದು'' ಎಂದರು ಮತ್ತು 'ಸತ್ಯವಿಶ್ವಾಸಿಯು ಸುಳ್ಳುಗಾರನಾಗಿರಬಹುದೇ' ಎಂದಾಗ ಅವರು ''ಇಲ್ಲ''ವೆಂದರು.

ಅಂದರೆ ಸತ್ಯವಿಶ್ವಾಸಿಯು ಹೇಡಿ ಅಥವಾ ಜಿಪುಣನಾಗಬೇಕೆಂದಲ್ಲ, ಸುಳ್ಳು ಅತ್ಯಂತ ಕೆಟ್ಟ ಪಾಪವಾಗಿದ್ದು ಸತ್ಯವಿಶ್ವಾಸಿಯು ಇದರಿಂದ ದೂರವಿರುತ್ತಾನೆಂದರ್ಥ. ಹೇಡಿತನ ಮತ್ತು ಜಿಪುಣತನ ಸಹ ಅತ್ಯಂತ ಅಪ್ರಿಯ ವಸ್ತುಗಳಾಗಿವೆ. ಆದರೆ ಸುಳ್ಳು ಇವುಗಳಿಗಿಂತ ದೊಡ್ಡ ಪಾಪವಾಗಿದೆ ಮತ್ತು ಸುಳ್ಳು ಹೇಳುವುದು ಒಬ್ಬ ಸತ್ಯವಿಶ್ವಾಸಿಗೆ ಶೋಭೆ ತರುವಂತಹದಲ್ಲ.

ಒಂದು ರಾತ್ರಿ ಪ್ರವಾದಿವರ್ಯರು(ಸ) ನರಕವಾಸಿಗಳಿಗೆ ವಿಭಿನ್ನ ರೀತಿಯ ಶಿಕ್ಷೆಯಾಗುತ್ತಿರುವುದನ್ನು ಕಂಡರು. ಅದರಲ್ಲಿ ಒಬ್ಬ ವ್ಯಕ್ತಿಯ ದವಡೆಯನ್ನು ಸೀಳಲಾಗುತ್ತಿತ್ತು, ಅವನು ಜನರಲ್ಲಿ ಸುಳ್ಳು ಮಾತುಗಳನ್ನು ಹರಡಿಸುತ್ತಿದ್ದ. ಹೀಗಾಗಿ ಕಿಯಾಮತ್‌ನ ದಿನದವರೆಗೆ ಅವನಿಗೆ ಇದೇ ರೀತಿಯ ಶಿಕ್ಷೆ ನೀಡಲಾಗುವುದೆಂದು ಪ್ರವಾದಿವರ್ಯರಿಗೆ(ಸ) ತಿಳಿಸಲಾಯಿತು.

ಕೆಲವು ಸಂದರ್ಭಗಳಲ್ಲಿ ಸವತಿಯರು ಒಬ್ಬರು ಇನ್ನೊಬ್ಬರ ಮನನೋಯಿಸಲು, ಪತಿಯು ತನ್ನೆಡೆಗೆ ಹೆಚ್ಚು ಗಮನ ಹರಿಸುತ್ತಾನೆ ಮತ್ತು ತನ್ನ ಬಗ್ಗೆ ಹೆಚ್ಚು ಕಾಳಜಿ ವಹಿಸುತ್ತಾನೆಂದು ತೋರ್ಪಡಿಸಲು ಪ್ರಯತ್ನಿಸುತ್ತಾರೆ.

ಹಝ್ರತ್ ಅಸ್ಮಾ(ರ) ವರದಿ ಮಾಡಿರುತ್ತಾರೆ. ಪ್ರವಾದಿವರ್ಯರ(ಸ) ಬಳಿ ಒಬ್ಬ ಮಹಿಳೆ ಬಂದು ಪ್ರವಾದಿಯವರೇ(ಸ), ನಾನು ನನ್ನ ಸವತಿಯ ಮುಂದೆ ನನ್ನ ಪತಿ ನನಗೆ ನೀಡುವುದಕ್ಕಿಂತ ಹೆಚ್ಚಾಗಿ ತೋರ್ಪಡಿಸಿದರೆ ಪಾಪವಾಗುವುದೇ? ಎಂದು ಕೇಳಿದಳು. ಅದಕ್ಕೆ ಪ್ರವಾದಿವರ್ಯರು(ಸ) ''ಕೊಡದೆ ಇರುವಂತಹ ವಸ್ತುವನ್ನು ತೋರ್ಪಡಿಸುವವರ ಉದಾಹರಣೆ ಸುಳ್ಳಿನ ಎರಡು ಬಟ್ಟೆಗಳನ್ನು ಹೊದ್ದುಕೊಂಡಿರುವವರ ಹಾಗಿದೆ'' ಎಂದರು. (ಬುಖಾರಿ)

*****

# ಸುಳ್ಳು ಪ್ರಚಾರ

ಯಾವುದೇ ಮಾತಿನ ಸತ್ಯ ಅಸತ್ಯತೆಯನ್ನು ಪರಾಮರ್ಶಿಸದೆ ಬೇರೆಯವರಿಗೆ ತಲುಪಿಸಿಬಿಡುವ ಪ್ರವೃತ್ತಿಯೂ ಸಮಾಜದಲ್ಲಿ ಹೆಚ್ಚಿನ ತಪ್ಪು ಕಲ್ಪನೆಗಳನ್ನು ಹರಡಲು ಕಾರಣವಾಗುತ್ತದೆ. ಹೀಗೆ ಒಬ್ಬರ ಬಾಯಿಯಿಂದ ಹೊರಟ ಮಾತು ಹಲವೆಡೆ ಸಂಚರಿಸುತ್ತಾ ಚಿಕ್ಕ ವಿಷಯವೂ ದೊಡ್ಡದಾಗಿ ಬಿಡುತ್ತದೆ. ಏಕೆಂದರೆ ಪ್ರತಿಯೊಬ್ಬ ಮನುಷ್ಯನು ಒಂದು ವಿಷಯ ಬೇರೆಯವರಿಗೆ ತಿಳಿಸುವಾಗ ಸ್ವಲ್ಪವಾದರೂ ಹೆಚ್ಚು ಕಡಿಮೆ ಮಾಡುವುದು ಸಹಜ. ಹೀಗೆ ಮೊದಲ ವ್ಯಕ್ತಿಯಿಂದ ಹೊರಟ ಮಾತು ಕೊನೆಯ ವ್ಯಕ್ತಿಯವರೆಗೆ ತಲುಪುವಷ್ಟರಲ್ಲಿ ಏನೇನೋ ಆಗಿಬಿಟ್ಟಿರುತ್ತದೆ.

ಈ ರೀತಿ ಒಬ್ಬರಿಂದ ಇನ್ನೊಬ್ಬರತ್ತ ಹರಡುವ ಮಾತನ್ನು ಸುಳ್ಳು ಪ್ರಚಾರ ಅಥವಾ ವದಂತಿಯೆನ್ನುತ್ತಾರೆ. ಇದು ಸಹ ಒಂದು ಬಗೆಯ ಸುಳ್ಳಾಗಿದೆ.

ಒಂದು ಮಾತನ್ನು ಪರಾಮರ್ಶಿಸದೆ ಮುಂದೆ ತಲುಪಿಸಿ ಬಿಡುವ ಮನುಷ್ಯನ ಪ್ರವೃತ್ತಿಯೂ ಅವನು ಸುಳ್ಳುಗಾರನೆಂಬುದಕ್ಕೆ ಸಾಕ್ಷಿಯಾಗಿದೆ. (ಮುಸ್ಲಿಮ್)

ಇಮಾಮ್ ಮಾಲಿಕ್‌ರು(ರ) ಹೇಳುತ್ತಾರೆ, ಯಾರಿಂದಲೋ ಕೇಳಿರುವ ಮಾತನ್ನು ಪರಾಮರ್ಶಿಸದೆ ಮುಂದೆ ತಲುಪಿಸಿ ಬಿಡುವ ವ್ಯಕ್ತಿಯು ತಪ್ಪಿನಿಂದ ರಕ್ಷಿಸಿಕೊಳ್ಳಲು ಸಾಧ್ಯವಿಲ್ಲ ಮತ್ತು ಅವನು ಇಮಾಮ್ ಆಗಲು ಅರ್ಹನಲ್ಲ. (ಮುಸ್ಲಿಮ್)

ಅಬ್ದುರ್ರಹ್ಮಾನ್ ಬಿನ್ ಮಹದಿ(ರ) ಹೇಳುತ್ತಾರೆ, ಎಲ್ಲಿಯವರೆಗೆ ಒಬ್ಬ ವ್ಯಕ್ತಿ ಒಂದು ಮಾತನ್ನು ಪರಾಮರ್ಶಿಸದೆ ಮುಂದೆ ತಲುಪಿಸಿ ಬಿಡುವ ಪ್ರವೃತ್ತಿಯಿಂದ ತನ್ನ ನಾಲಗೆಯನ್ನು ರಕ್ಷಿಸುವುದಿಲ್ಲವೋ ಅವನು ನಂಬಲರ್ಹ ಇಮಾಮ್ ಆಗಲು ಸಾಧ್ಯವಿಲ್ಲ.

(ಮುಸ್ಲಿಮ್)

*****

# ಪರನಿಂದೆ, ಚಾಡಿ ಮತ್ತು ಅಪವಾದ

ಒಮ್ಮೆ ಪ್ರವಾದಿವರ್ಯರು(ಸ) ಸಹಾಬಿಗಳಿಗೆ ಪರನಿಂದೆಯನ್ನು ಮನವರಿಕೆ ಮಾಡಿಕೊಡಲಿಕ್ಕಾಗಿ ಹೀಗೆ ಪ್ರಶ್ನಿಸಿದರು.

''ನಿಮಗೆ ಪರನಿಂದೆ ಏನೆಂದು ತಿಳಿದಿದೆಯೇ?'' 'ಅಲ್ಲಾಹ್ ಮತ್ತು ಪ್ರವಾದಿಯೇ ಚೆನ್ನಾಗಿ ಬಲ್ಲರು' ಎಂದು ಸಹಾಬಿಗಳು ಹೇಳಿದರು.

ಪ್ರವಾದಿವರ್ಯರು(ಸ) ಹೇಳಿದರು, ''ನಿನ್ನ ಸಹೋದರನ ಕುರಿತು ಆತನಿಗೆ ಇಷ್ಟವಿಲ್ಲದಿರುವುದನ್ನು ಹೇಳುವುದು.''

'ಸಹೋದರನಲ್ಲಿರುವಂತಹ ವಿಷಯವನ್ನೇ ನಾವು ಹೇಳಿದರೆ?'

ಓರ್ವರು ಸಂದೇಹ ವ್ಯಕ್ತಪಡಿಸಿದರು. ಪ್ರವಾದಿ(ಸ) ಹೇಳಿದರು:

''ಆತನಲ್ಲಿ ಇರುವುದನ್ನೇ ಹೇಳಿದರೆ ನೀನು ಆತನ ದೂಷಣೆ ಮಾಡಿದೆ. ಇಲ್ಲದಿರುವುದನ್ನು ಹೇಳಿದರೆ ನೀನು ಆತನ ಮೇಲೆ ಸುಳ್ಳಾರೋಪ ಹೊರಿಸಿದೆ.'' (ಮುಸ್ಲಿಮ್)

ಈ ಮೇಲಿನ ಹದೀಸ್‌ನಿಂದ ಪರನಿಂದೆ ಮತ್ತು ಸುಳ್ಳಾರೋಪದ ನಡುವಿನ ವ್ಯತ್ಯಾಸ ಚೆನ್ನಾಗಿ ತಿಳಿದು ಬರುತ್ತದೆ.

ತಫ್‌ಹೀಮುಲ್ ಕುರ್‌ಆನಿನಲ್ಲಿ ಈ ಮೂರು ಶಬ್ದಗಳ ಅರ್ಥವನ್ನು ವಿವರಿಸುತ್ತಾ ಈ ರೀತಿ ಹೇಳಲಾಗಿದೆ-

ಬೆನ್ನ ಹಿಂದೆ ಇತರರ ದೂಷಣೆ ಮಾಡುವುದು ಹರಾಮ್ ಆಗಿದೆ. ಆ ದೂಷಣೆಯು ಸತ್ಯವಾಗಿದ್ದರೆ ಅದು ಪರನಿಂದೆಯಾಗಿದೆ, ಸುಳ್ಳಾಗಿದ್ದರೆ ಅಪವಾದವಾಗಿದೆ ಮತ್ತು ಇಬ್ಬರನ್ನು ಪರಸ್ಪರ ಜಗಳವಾಡಿಸಲು ಆಗಿದ್ದರೆ ಚಾಡಿಯಾಗಿದೆ.

ಪವಿತ್ರ ಕುರ್‌ಆನಿನಲ್ಲಿ ಪರನಿಂದೆಯಿಂದ ತಡೆಯುತ್ತಾ ಅಲ್ಲಾಹನು ಹೀಗೆ ಹೇಳಿದ್ದಾನೆ.

''ಸತ್ಯವಿಶ್ವಾಸಿಗಳೇ, ಹೆಚ್ಚಿನ ಗುಮಾನಿಗಳಿಂದ ದೂರವಿರಿ. ನಿಶ್ಚಯವಾಗಿಯೂ ಕೆಲವು ಗುಮಾನಿಗಳು ಪಾಪವಾಗಿವೆ. ದೋಷಾನ್ವೇಷಣೆ ಮಾಡದಿರಿ. ನಿಮ್ಮಲ್ಲಿ ಯಾರೂ ಯಾರ ಬಗ್ಗೆಯೂ ಪರದೂಷಣೆ ಮಾಡಬಾರದು. ನಿಮ್ಮಲ್ಲಿ ಯಾರಾದರೂ ತನ್ನ ಮೃತ ಸಹೋದರನ ಮಾಂಸ ತಿನ್ನುವುದನ್ನು ಇಷ್ಟಪಡುವನೇ? ನೀವು ಸ್ವತಃ ಇದನ್ನು ಅಸಹ್ಯಪಡುತ್ತೀರಿ.

ಅಲ್ಲಾಹನನ್ನು ಭಯಪಡಿರಿ, ಅಲ್ಲಾಹ್ ಪಶ್ಚಾತ್ತಾಪ ಸ್ವೀಕರಿಸುವವನೂ ಕರುಣಾನಿಧಿಯೂ ಆಗಿರುತ್ತಾನೆ.'' (ಪವಿತ್ರ ಕುರ್‌ಆನ್, 49:12)

ಹೀಗೆ ಒಬ್ಬ ವ್ಯಕ್ತಿಯಲ್ಲಿರುವ ಲೋಪದೋಷಗಳನ್ನು ಇತರರ ಮುಂದೆ ಹೇಳುವುದೇ ಪರನಿಂದೆಯಾಗಿದೆ. ಆದರೆ ನಾವು ಹಲವು ಬಾರಿ ಪರನಿಂದೆ ಮಾಡಿ, ಅವನಲ್ಲಿರುವ ಗುಣವನ್ನಷ್ಟೇ ಹೇಳಿದ್ದೇವೆಂದೂ ಅದರಲ್ಲಿ ನಮ್ಮ ತಪ್ಪೇನಿಲ್ಲವೆಂದೂ ನಮ್ಮನ್ನು ನಾವೇ ಸಂತೈಸಿಕೊಳ್ಳುತ್ತೇವೆ. ಆದರೆ ಸತ್ಯವಾಗಿದ್ದರೂ ಈ ರೀತಿಯ ಪರನಿಂದೆಯನ್ನೇ ತನ್ನ ಸಹೋದರನ ಮೃತ ದೇಹದ ಮಾಂಸ ತಿನ್ನುವುದಕ್ಕೆ ಹೋಲಿಸಲಾಗಿದೆ.

ಪ್ರವಾದಿವರ್ಯರು(ಸ) ಮಿಅ್‌ರಾಜ್‌ಗೆ ಹೋದಾಗ ಕೆಲವರ ಉಗುರುಗಳು ತಾಮ್ರದ್ದಾಗಿರುವುದನ್ನು ಕಂಡರು. ಅವರು ಅವುಗಳಿಂದ ತಮ್ಮ ಮುಖ ಮತ್ತು ಎದೆಯನ್ನು ಪರಚಿಕೊಂಡು ಗಾಯಗೊಳಿಸಿಕೊಳ್ಳುತ್ತಿದ್ದರು. ಇವರು ಯಾರೆಂದು ಜಿಬ್ರೀಲ್‌ರ(ಅ) ಬಳಿ ಕೇಳಿದಾಗ, ಇವರು ಜನರ ಮಾಂಸ ತಿನ್ನುವ ಜನರಾಗಿದ್ದರು (ಜನರ ನಿಂದೆ ಮಾಡುವವರಾಗಿದ್ದರು) ಮತ್ತು ಜನರ ಘನತೆಗೆ ಧಕ್ಕೆ ತರುವಂತಹವರಾಗಿದ್ದರು ಎಂದು ಉತ್ತರಿಸಿದರು.

ಕೇವಲ ನಾಲಗೆಯಿಂದ ವಿಶ್ವಾಸವಿರಿಸಿದವರನ್ನು ಉದ್ದೇಶಿಸಿ ಪ್ರವಾದಿವರ್ಯರು(ಸ) ಒಮ್ಮೆ ಹೀಗೆ ಹೇಳಿದರು–

''ಓ ಜನರೇ! ತನ್ನ ಮುಸ್ಲಿಮ್ ಸಹೋದರನ ಪರನಿಂದೆ ಮಾಡಬೇಡಿ ಮತ್ತು ಅವರ ಗುಪ್ತ ನಡತೆಗಳನ್ನು ನೀವು ಕೆದಕಿ ನೋಡಬೇಡಿರಿ. ತನ್ನ ಮುಸ್ಲಿಮ್ ಸಹೋದರನ ರಹಸ್ಯವನ್ನು ಕೆದಕುವಾತನ ರಹಸ್ಯವನ್ನು ಅಲ್ಲಾಹನೂ ಕೆದಕುವನು. ಅಲ್ಲಾಹನು ಯಾರ ರಹಸ್ಯವನ್ನು ಕೆದಕಿದನೋ ಆತ ತನ್ನ ಮನೆಯೊಳಗಿದ್ದರೂ ಅಲ್ಲಾಹ್ ಅಪಮಾನಿಸುವನು.'' (ಅಬೂದಾವೂದ್)

ಇಮಾಮ್ ಮಾಲಿಕರು ಉಲ್ಲೇಖಿಸುತ್ತಾರೆ, ಈಸಾ(ಅ) ಹೀಗೆ ಹೇಳುತ್ತಿದ್ದರು;

'ಅಲ್ಲಾಹನ ಸ್ಮರಣೆಗೆ ಹೊರತಾಗಿ ಇತರ ವಿಷಯಗಳ ಬಗ್ಗೆ ಹೆಚ್ಚು ಹೆಚ್ಚು ಮಾತನಾಡುವುದರಿಂದ ಮನುಷ್ಯನ ಹೃದಯವು ಕಠೋರವಾಗುತ್ತದೆ ಮತ್ತು ನಿಶ್ಚಯವಾಗಿಯೂ ಕಠೋರ ಹೃದಯಗಳು ಅಲ್ಲಾಹನಿಂದ ದೂರವಾಗುತ್ತವೆ. ಆದರೆ ನಿಮಗೆ ಅದು ತಿಳಿದಿಲ್ಲ ಹಾಗೂ ದೇವನು ಇತರರ ಪಾಪಗಳನ್ನು ನೋಡುವಂತೆ ನೀವು ನೋಡಬೇಡಿ, ನೀವು ಅವನ ದಾಸರಾಗಿರುವಿರಿ. ಹೀಗಾಗಿ ನಿಮ್ಮ ನಿಮ್ಮ ಪಾಪಗಳ ಬಗ್ಗೆ ನಿಗಾವಹಿಸಿರಿ. ಜನರಲ್ಲಿ ಕೆಲವರು ಕಷ್ಟದ ಜೀವನ ನಡೆಸುತ್ತಿದ್ದಾರೆ ಮತ್ತು ಕೆಲವರು ಸುಖಕರ ಜೀವನ ನಡೆಸುತ್ತಿದ್ದಾರೆ. ನೀವು ಕಷ್ಟದಲ್ಲಿರುವವರ ಮೇಲೆ ಕರುಣೆ ತೋರಿರಿ ಮತ್ತು ಅಲ್ಲಾಹನಿಗೆ ಕೃತಜ್ಞತೆ ಸಲ್ಲಿಸಿರಿ.' (ಮುಅತ್ತಾ)

ಚಾಡಿಕೋರನು ಸ್ವರ್ಗ ಪ್ರವೇಶಿಸಲಾರನೆಂದು ಪ್ರವಾದಿವರ್ಯರು(ಸ) ಹೇಳಿರುವುದಾಗಿ ಹುದೈಫ(ರ) ಉಲ್ಲೇಖಿಸಿರುತ್ತಾರೆ. (ಬುಖಾರಿ)

ಪ್ರವಾದಿ(ಸ) ಒಮ್ಮೆ ಎರಡು ಗೋರಿಗಳ ಬಳಿಯಿಂದ ಹಾದು ಹೋಗುತ್ತಿದ್ದಾಗ ಹೀಗೆಂದರು: ''ಇಲ್ಲಿ ಇಬ್ಬರಿಗೆ ಶಿಕ್ಷೆ ನೀಡಲಾಗುತ್ತಿದೆ. ಈ ಶಿಕ್ಷೆ ಕೂಡಾ ಅವರಿಂದ ಬಿಡಲು ಸಾಧ್ಯವಿಲ್ಲದಂತಹ ಪಾಪಗಳಿಗಾಗಿ ಅಲ್ಲ, ಅವರು ಬಯಸಿದ್ದರೆ ಅದನ್ನು ಸುಲಭದಲ್ಲಿ ತ್ಯಜಿಸಬಹುದಾಗಿತ್ತು. ವಾಸ್ತವದಲ್ಲಿ ಧಿಕ್ಕಾರಿಗಳಿಗೆ ಅದನ್ನು ತ್ಯಜಿಸುವುದು ಬಹಳ ಕಷ್ಟ ಅವರಿಬ್ಬರ ಪೈಕಿ ಒಬ್ಬನು ಜನರ ಸಂಬಂಧವನ್ನು ಕೆಡಿಸಲು ವಿಷಯವನ್ನು ಅಲ್ಲಿಂದಿಲ್ಲಿಗೆ, ಇಲ್ಲಿಂದಲ್ಲಿಗೆ ಮುಟ್ಟಿಸುತ್ತಿದ್ದ. ಇನ್ನೊಬ್ಬನು ಮೂತ್ರದ ಹನಿಗಳ ಬಗ್ಗೆ ಜಾಗ್ರತೆ ವಹಿಸುತ್ತಿರಲಿಲ್ಲ.'' (ಬುಖಾರಿ)

ಅಬ್ದುಲ್ಲಾ ಬಿನ್ ಮಸ್‌ಊದ್(ರ) ಉಲ್ಲೇಖಿಸುತ್ತಾರೆ ಪ್ರವಾದಿವರ್ಯರು(ಸ) ''ಒಮ್ಮೆ ನಾನು ನಿಮಗೆ ಅತ್ಯಂತ ಕೆಟ್ಟ ಅಪವಾದ ಯಾವುದೆಂದು ತಿಳಿಸಲೇ?'' ಎಂದು ಕೇಳಿದರು.

ತರುವಾಯ ಹೀಗೆಂದರು: ''ಅತ್ಯಂತ ಕೆಟ್ಟ ಅಪವಾದ ಜನರ ಸಂಬಂಧ ಕೆಡಿಸಲು ಮಾಡಲಾಗುವ ಚಾಡಿಯಾಗಿದೆ.'' (ಮುಸ್ಲಿಮ್)

ಆಯಿಶಾ(ರ) ಈ ರೀತಿ ಉಲ್ಲೇಖಿಸಿದ್ದಾರೆ, ಪ್ರವಾದಿವರ್ಯರು(ಸ) ಈ ರೀತಿ ಹೇಳಿದ್ದಾರೆ. ''ಇತರರ ಚಾಡಿ ಹೇಳುವುದನ್ನು ನಾನು ಮೆಚ್ಚುವುದಿಲ್ಲ, ಆದರಿಂದ ಎಷ್ಟು ಲಾಭ ; ದೊರೆಯುವುದಿದ್ದರೂ ಸರಿ.'' (ತಿರ್ಮಿದಿ)

ಒಮ್ಮೆ ಆಯಿಶಾರು(ರ) ಯಾರ ಬಗ್ಗೆಯೋ ಕೆಟ್ಟದಾಗಿ ಮಾತನಾಡಿದಾಗ ಪ್ರವಾದಿವರ್ಯರು(ಸ) ಆ ಬಗ್ಗೆ ಅಸಂತೋಷ ವ್ಯಕ್ತಪಡಿಸಿ ಹೀಗೆ ಹೇಳಿದ್ದರು:

''ಇತರರ ಬಗ್ಗೆ ಕೆಟ್ಟದಾಗಿ ಮಾತಾಡುವುದನ್ನು ನಾನು ಮೆಚ್ಚುವುದಿಲ್ಲ, ಅದರಿಂದ ಎಷ್ಟು ಲಾಭ ದೊರೆಯುವುದಿದ್ದರೂ ಸರಿ.'' (ತಿರ್ಮಿದಿ)

ಆಯಿಶಾ(ರ) ಹೀಗೆ ವರದಿ ಮಾಡಿರುವರು. (ಒಮ್ಮೆ) ನಾನು ಪ್ರವಾದಿ(ಸ) ಅವರಿಗೆ ಹೀಗೆ ಹೇಳಿದೆ. 'ಸಫಿಯ್ಯಾರವರ ಈ ಕೊರತೆಯೇನು(ಆಕೆ ಗಿಡ್ಡವಾಗಿದ್ದಾರೆಂಬುದು) ಕಡಿಮೆಯೇ?' ಇದನ್ನು ಕೇಳಿದ ಪ್ರವಾದಿ(ಸ) ಹೇಳಿದರು: ''ಆಯಿಶಾ! ನೀನು ಎಷ್ಟು ಹೊಲಸು ಮಾತನ್ನು ನಾಲಗೆಯಿಂದ ಹೊರಡಿಸಿರುವಿಯೆಂದರೆ ಅದನ್ನು ಸಮುದ್ರದಲ್ಲಿ ಬೆರೆಸಿದರೆ ಅದರಿಂದ ಇಡೀ ಸಮುದ್ರವು ಹೊಲಸಾಗುವುದು.'' (ತಿರ್ಮಿದಿ)

ಪ್ರವಾದಿವರ್ಯರು(ಸ) ಹೀಗೆ ಹೇಳಿದ್ದಾರೆ, ''ಯಾರನ್ನು ನೋಡಿದೊಡನೆ ಅಲ್ಲಾಹನು ನೆನಪಾಗುತ್ತಾನೋ ಅವರು ಅಲ್ಲಾಹನ ದಾಸರ ಪೈಕಿ ಅತ್ಯುತ್ತಮರು, ಹೆಚ್ಚು ಚಾಡಿ ಹೇಳುವವರು, ಸ್ನೇಹಿತರ ಸಂಬಂಧ ಕೆಡಿಸುವವರು ಹಾಗೂ ಇತರರನ್ನು ಸಂಕಷ್ಟಕ್ಕೆ

ಸಿಲುಕಿಸಲು ಅವಕಾಶಕ್ಕಾಗಿ ಕಾಯುತ್ತಾ ಇರುವವರು ಅಲ್ಲಾಹನ ದಾಸರ ಪೈಕಿ ಅತ್ಯಂತ ಕೆಟ್ಟವರಾಗಿದ್ದಾರೆ.''(**ಮುಸ್ನದ್ ಅಹ್ಮದ್, ವರದಿ: ಹ. ಅಬ್ದುರ್ರಹ್ಮಾನ್ ಬಿನ್ ಗುನಮ್, ಆಸ್ಮಾ ಬಿಂತಿ ಯಝೀದ್**)

ಪ್ರವಾದಿವರ್ಯರು(ಸ) ಸಹಾಬಿಗಳೊಡನೆ ಹೀಗೆ ಹೇಳಿದರು:

''ನಿಮ್ಮ ಪೈಕಿ ಯಾರೊಬ್ಬರೂ ಇತರರ ಕುರಿತ ಮಾತಗಳನ್ನು ನನ್ನ ಬಳಿ ತರಬೇಡಿ. ಏಕೆಂದರೆ ನಿಮ್ಮ ಬಳಿ ಬಂದಾಗ ನನ್ನ ಹೃದಯವು ನಿಮ್ಮೆಲ್ಲರ ಕುರಿತು ಸ್ವಚ್ಛವಾಗಿರಬೇಕೆಂದು ನಾನು ಇಚ್ಛಿಸುತ್ತೇನೆ.'' (**ಅಬೂ ದಾವೂದ್, ವರದಿ: ಇಬ್ನು ಮಸ್‌ಊದ್**)

ಪರನಿಂದೆಯ ಇನ್ನೊಂದು ನಷ್ಟವೆಂದರೆ, ಪರನಿಂದೆ ಮಾಡುವ ವ್ಯಕ್ತಿಯು ಮಾಡಿರುವ ಸತ್ಕರ್ಮಗಳು ಯಾರ ಬಗ್ಗೆ ಪರನಿಂದೆ ಮಾಡಲಾಗಿದೆಯೋ ಅವನ ಪಾಲಾಗುತ್ತವೆ.

ಖ್ವಾಜಾ ಹಸನ್ ಬಸರಿಯವರಿಗೆ(ರ) ಒಮ್ಮೆ ಒಬ್ಬ ವ್ಯಕ್ತಿಯು ಅವರ ಪರನಿಂದೆ ಮಾಡಿರುವುದರ ಬಗ್ಗೆ ತಿಳಿಸಲಾಯಿತು. ಆಗ ಅವರು ಆ ವ್ಯಕ್ತಿಗೆ ಕೆಲವು ಖರ್ಜೂರುಗಳನ್ನು ಮತ್ತು ಅದರೊಂದಿಗೆ ಒಂದು ಸಂದೇಶವನ್ನು ಉಡುಗೊರೆಯಾಗಿ ಕಳುಹಿಸಿಕೊಟ್ಟರು. ಅದರಲ್ಲಿ ಹೀಗೆ ಬರೆಯಲಾಗಿತ್ತು. 'ನೀವು ತಮ್ಮ ಕೆಲವು ಸತ್ಕರ್ಮಗಳನ್ನು ನನ್ನ ಪಾಲಿಗೆ ಹಸ್ತಾಂತರಿಸಿರುವಿರೆಂದು ನನಗೆ ತಿಳಿಯಿತು. ನಿಮ್ಮ ಈ ಉಪಕಾರದ ಪ್ರತಿಫಲವಾಗಿ ಇದಕ್ಕಿಂತ ಹೆಚ್ಚು ಕೊಡಲು ನನ್ನ ಬಳಿ ಏನೂ ಇಲ್ಲ, ಹೀಗಾಗಿ ಕೆಲವು ಖರ್ಜೂರಗಳನ್ನು ಮಾತ್ರ ಕಳುಹಿಸಿದ್ದೇನೆ. ದಯವಿಟ್ಟು ಸ್ವೀಕರಿಸಬೇಕು.'

ಒಟ್ಟಿನಲ್ಲಿ ಪರನಿಂದೆ ಒಂದು ಹೀನ ಕೃತ್ಯವಾಗಿದ್ದು ತನ್ನ ಆತ್ಮ ಸಂಸ್ಕರಣೆಯ ಚಿಂತೆ ಇರುವವನು ಇದರಿಂದ ದೂರವಿರುತ್ತಾನೆ.

ಇಲ್ಲಿ ಒಂದು ವಿಷಯದ ಸ್ಪಷ್ಟೀಕರಣದ ಅಗತ್ಯವಿದೆ. ಬೆನ್ನಹಿಂದೆ ಹೇಳಲಾಗುವ ಎಲ್ಲ ಮಾತುಗಳು ಪರನಿಂದೆಯಾಗುವುದಿಲ್ಲ, ಕೆಲವು ಸಲ ಈ ರೀತಿ ಮಾಡುವುದು ಪಾಪವೂ ಆಗುವುದಿಲ್ಲ.

ಉದಾಹರಣೆಗೆ ಯಾರಿಗಾದರೂ ಹೊಸ ಸಂಬಂಧ ಹುಡುಕುವಾಗ, ಸಂಬಂಧಪಟ್ಟ ವ್ಯಕ್ತಿಯ ಬಗ್ಗೆ ಕೇಳಿದರೆ, ಅವನ ಬಗ್ಗೆ ತಿಳಿದಿರುವ ವ್ಯಕ್ತಿಯು ಅವನಲ್ಲಿರುವ ದೋಷಗಳ ಬಗ್ಗೆ ಹೇಳುವುದು ಅವಶ್ಯಕವಾಗುತ್ತದೆ. ಇಲ್ಲವಾದಲ್ಲಿ ಕೆಟ್ಟ ಜನರೊಂದಿಗೆ ಸಂಬಂಧವಾಗುವ ಸಾಧ್ಯತೆಯಿರುತ್ತದೆ. ಹೀಗೆ ಇತರರ ಹಿತದೃಷ್ಟಿಯಿಂದ ಒಳಿತಿನ ಕೆಲಸಗಳಲ್ಲಿ ಮಾಡುವ ಪರನಿಂದೆ ತಪ್ಪಲ್ಲ.

ಅದೇ ರೀತಿ ಯಾವುದೇ ವ್ಯಕ್ತಿಯ ಜೀವ, ಮಾನ, ಆಸ್ತಿ ಹಾಗೂ ಧರ್ಮಕ್ಕೆ ಅಪಾಯವಿರುವಾಗ, ಆ ಅಪಾಯದಿಂದ ಪಾರಾಗಲು ದುಷ್ಟರ ಹಾಗೂ ಪಥಭ್ರಷ್ಟರ ಬಗ್ಗೆ ಹೇಳಲಾಗುವುದೆಲ್ಲ ಪರನಿಂದೆಯಾಗುವುದಿಲ್ಲ.

ಪರನಿಂದೆಯಂತೆ ಅಪವಾದವು ಸಹ ಘೋರ ಪಾಪವಾಗಿದೆ.

ಹಝ್ರತ್ ಅಬ್ದುಲ್ಲಾ ಬಿನ್ ಉಮರ್‌ರು(ರ) ಉಲ್ಲೇಖಿಸುತ್ತಾರೆ, ನಾನು ಪ್ರವಾದಿವರ್ಯರು(ಸ) ಈ ರೀತಿ ಹೇಳುವುದನ್ನು ಕೇಳಿದ್ದೇನೆ.

''ಯಾರು ಅಲ್ಲಾಹನ ಮೇರೆಗಳಲ್ಲಿ ಯಾವುದಾದರೂ ಒಂದು ಮೇರೆಯನ್ನು ತಡೆಯುವ ಶಿಫಾರಸು ಮಾಡಿದನೋ ಅವನು ಅಲ್ಲಾಹನ ವಿರೋಧ ಮಾಡಿದನು ಮತ್ತು ತಿಳಿದಿದ್ದರೂ ಸಹ ವ್ಯರ್ಥ ಮಾತುಗಳಲ್ಲಿ ಜಗಳ ಮಾಡುವವನೂ ಆ ಜಗಳ ತೊರೆಯುವವರೆಗೆ ಅಲ್ಲಾಹನ ಶಾಶ್ವತ ಕ್ರೋಧಕ್ಕೆ ಒಳಗಾಗುತ್ತಾನೆ ಹಾಗೂ ತನ್ನ ಮುಸ್ಲಿಮ್ ಸಹೋದರನ ಬಗ್ಗೆ ಅವನಲ್ಲಿರದ ಮಾತನ್ನು ಹೇಳುವವನನ್ನು ಅಲ್ಲಾಹನು ನರಕವಾಸಿಗಳ ಕೀವು ಮತ್ತು ರಕ್ತಗಳ ಕೊಚ್ಚೆಯಲ್ಲಿಡುವನು. (ಅವನು ಹೇಳಿರುವುದರ ಕುರಿತು ಕ್ಷಮೆ ಯಾಚಿಸುವವರೆಗೆ)

**(ಅಬೂದಾವೂದ್)**

ಅಪವಾದದ ಪಾಪಕ್ಕಾಗಿ ನೀಡಲಾಗುವ ಶಿಕ್ಷೆಯ ಕುರಿತು ಪವಿತ್ರ ಕುರ್‌ಆನಿನಲ್ಲಿ ಈ ರೀತಿ ಹೇಳಲಾಗಿದೆ.

**''ಸುಶೀಲೆಯರಾದ, ಮುಗ್ಧೆಯರಾದ ಸತ್ಯವಿಶ್ವಾಸಿನಿಯರ ಮೇಲೆ ಸುಳ್ಳಾರೋಪ ಹೊರಿಸುವವರನ್ನು ಈ ಲೋಕದಲ್ಲೂ ಪರಲೋಕದಲ್ಲೂ ಶಪಿಸಲಾಗಿದೆ ಮತ್ತು ಅವರಿಗಾಗಿ ಮಹಾ ಯಾತನೆ ಇದೆ. ಅವರು ತಮ್ಮ ನಾಲಗೆಗಳೂ ಕೈಕಾಲುಗಳೂ ಅವರ ಕೃತ್ಯಗಳ ಸಾಕ್ಷ್ಯ ಹೇಳಲಿರುವ ಆ ದಿನವನ್ನು ಮರೆಯದಿರಲಿ. ಅಂದು ಅಲ್ಲಾಹ್ ಅವರಿಗೆ ತಕ್ಕುದಾದ ಪ್ರತಿಫಲವನ್ನು ಸಂಪೂರ್ಣವಾಗಿ ಕೊಡುವನು ಮತ್ತು ಅಲ್ಲಾಹನೇ ಪರಮಸತ್ಯನು ಮತ್ತು ಸತ್ಯವನ್ನು ಸತ್ಯವೆಂದು ಸಾಧಿಸಿ ತೋರಿಸುವವನು ಎಂಬುದು ಅವರಿಗೆ ತಿಳಿಯುವುದು.''**

**(ಪವಿತ್ರ ಕುರ್‌ಆನ್, 24:23-25)**

*****

# ಬೈಗುಳ ಮತ್ತು ತೆಗಳಿಕೆ

ಪ್ರವಾದಿವರ್ಯರು(ಸ) ಹೇಳುತ್ತಾರೆ:

''ಇಬ್ಬರು ಪರಸ್ಪರ ಬೈದುಕೊಳ್ಳುತ್ತಿರುವಾಗ, ಮೊದಲು ಇದನ್ನು ಆರಂಭಿಸಿದವನು ಪಾಪಕ್ಕೆ ಅರ್ಹನಾಗುತ್ತಾನೆ, ಎರಡನೆಯವನು ಅತಿರೇಕವೆಸಗುವ ಹೊರತಾಗಿ.''

(ಮುಸ್ಲಿಮ್, ವರದಿ: ಅಬೂಹುರೈರ)

ಆಯಿಶಾರು(ರ) ವರದಿ ಮಾಡಿರುತ್ತಾರೆ:

ಒಮ್ಮೆ ಒಬ್ಬ ವ್ಯಕ್ತಿಯು ಪ್ರವಾದಿ(ಸ) ಅವರ ಸನ್ನಿಧಿಯಲ್ಲಿ ಹಾಜರಾಗಲು ಅನುಮತಿ ಕೋರಿದನು.

ಪ್ರವಾದಿವರ್ಯರು(ಸ) ಹೇಳಿದರು, ''ಅವನಿಗೆ ಅನುಮತಿ ಕೊಟ್ಟು ಬಿಡಿ. ಆತ ತನ್ನ ಗೋತ್ರದ ಅತ್ಯಂತ ಕೆಟ್ಟ ವ್ಯಕ್ತಿಯಾಗಿದ್ದಾನೆ.'' ಬಳಿಕ ಆತ ಪ್ರವಾದಿವರ್ಯರ(ಸ) ಬಳಿ ಕುಳಿತಾಗ ಪ್ರವಾದಿ(ಸ) ಆತನೊಂದಿಗೆ ಪ್ರಸನ್ನವದನವಾಗಿ ಮತ್ತು ಸಂಕೋಚವಿಲ್ಲದೆ ವರ್ತಿಸಿದರು. ಅನಂತರ ಆತ ಹೊರಟು ಹೋದಾಗ ಹ.ಆಯಿಶಾ(ರ) ಕೇಳಿದರು, 'ಅಲ್ಲಾಹನ ಪ್ರವಾದಿಗಳೇ! ತಾವು ವ್ಯಕ್ತಿಯ ಬಗ್ಗೆ ಇಂತಿಂತಹ ವಿಷಯಗಳನ್ನು ಹೇಳಿದ್ದೀರಿ ಆದರೆ ತಾವು ಆತನೊಂದಿಗೆ ಪ್ರಸನ್ನವದನರಾಗಿ ಮತ್ತು ಸಂಕೋಚವಿಲ್ಲದೆ ವರ್ತಿಸಿದಿರಿ?' ಆಗ ಪ್ರವಾದಿ(ಸ) ಹೇಳಿದರು: ''ನಾನು ಅಸಭ್ಯವಾಗಿ ನುಡಿದುದನ್ನು ನೀನೆಂದಾದರೂ ಕೇಳಿರುವೆಯಾ? ಯಾರಿಂದ ಜನರು ಆತನ ಕೇಡು ಅಥವಾ ಅಸಭ್ಯ ನುಡಿಯ ಕಾರಣ ದೂರವಿರುವವರೋ ಅಂತಹ ವ್ಯಕ್ತಿ ಕಿಯಾಮತ್ ದಿನದಂದು ಅತ್ಯಂತ ಕೆಟ್ಟ ವ್ಯಕ್ತಿಯಾಗಿರುವನು.'' (ಮುಸ್ಲಿಮ್)

ಪ್ರವಾದಿವರ್ಯರು(ಸ) ಹೇಳಿದರು– ''ನಾಲ್ಕು ದುರ್ಗುಣಗಳು ಯಾರಲ್ಲಿವೆಯೋ ಅವನು ಅಪ್ಪಟ ಮುನಾಫಿಕ್(ಕಪಟ ವಿಶ್ವಾಸಿ) ಆಗಿದ್ದಾನೆ. ಯಾರಲ್ಲಾದರೂ ಅವುಗಳ ಪೈಕಿ ಒಂದು ದುರ್ಗುಣವಿದ್ದರೆ ಅದನ್ನು ತೊರೆಯುವವರೆಗೂ ಅವನಲ್ಲಿ ಅಷ್ಟಂಶ ಕಾಪಟ್ಯವಿರುವುದು.

1) ಅವನ ಬಳಿ ಏನಾದರೂ ಅಮಾನತ್ ಇಟ್ಟರೆ ಅದರಲ್ಲಿ ವಂಚನೆ ಮಾಡುವುದು.

2) ಮಾತಾಡುವಾಗ ಸುಳ್ಳು ಹೇಳುವುದು.

3) ವಚನ ಕೊಟ್ಟರೆ ಉಲ್ಲಂಘಿಸುವುದು.

4) ಯಾರೊಂದಿಗಾದರೂ ಜಗಳಕ್ಕಿಳಿದರೆ ಬೈಯುವುದು ಮತ್ತು ಸತ್ಯ, ನ್ಯಾಯದ ಮೇರೆ ಮೀರುವುದು.'' (ಬುಖಾರಿ)

ಹಝ್ರತ್ ಅಬ್ದುಲ್ಲಾ ಬಿನ್ ಅಮ್ರ್ ಬಿನ್ ಆಸ್‌ರು(ರ) ವರದಿ ಮಾಡಿರುತ್ತಾರೆ. ಪ್ರವಾದಿ(ಸ) ಹೇಳಿದರು, ''ತನ್ನ ತಂದೆತಾಯಿಯನ್ನು ಬೈಯುವುದು ದೊಡ್ಡ ಪಾಪಗಳಲ್ಲೊಂದಾಗಿದೆ.''

ಸಹಾಬಿಗಳು ಕೇಳಿದರು: 'ಪ್ರವಾದಿಗಳೇ! ಯಾರಾದರೂ ತನ್ನ ತಂದೆತಾಯಿಯನ್ನೇ ಹೇಗೆ ಬೈಯುತ್ತಾರೆ?'

ಪ್ರವಾದಿವರ್ಯರು(ಸ) ಹೇಳಿದರು: ''ಹೌದು! ಒಬ್ಬ ವ್ಯಕ್ತಿಯು ಇನ್ನೊಬ್ಬನ ತಂದೆಯನ್ನು ಬೈಯುತ್ತಾನೆ, ಆಗ ಆ ವ್ಯಕ್ತಿಯು ಇವನ ತಂದೆಯನ್ನು ಬೈಯುತ್ತಾನೆ. ಅದೇ ರೀತಿ ಒಬ್ಬ ವ್ಯಕ್ತಿಯು ಇನ್ನೊಬ್ಬನ ತಾಯಿಯನ್ನು ಬೈಯುತ್ತಾನೆ,ಆಗ ಆ ವ್ಯಕ್ತಿಯು ಇವನ ತಾಯಿಯನ್ನು ಬೈಯುತ್ತಾನೆ.(ಹೀಗೆ ಅವನು ಸ್ವತಃ ತನ್ನ ತಂದೆತಾಯಿಯರಿಗೆ ಬೈಯುವುದಕ್ಕೆ ಕಾರಣವಾದ.)'' (ಮುಸ್ಲಿಮ್)

ಪ್ರವಾದಿವರ್ಯರು(ಸ) ನಾಲಗೆಯ ಬಗ್ಗೆ ಎಷ್ಟು ಜಾಗೃತರಾಗಿದ್ದರೆಂದರೆ ಕಿಡಿಗೇಡಿಗಳ ಮಾತುಗಳಿಗೂ ಉತ್ತಮ ರೀತಿಯಲ್ಲಿ ಉತ್ತರಿಸುತ್ತಿದ್ದರು.

ಆಯಿಶಾರು(ರ) ವರದಿ ಮಾಡಿರುತ್ತಾರೆ:

'ಒಮ್ಮೆ ಕೆಲವು ಯಹೂದಿಯರು ಪ್ರವಾದಿವರ್ಯರ(ಸ) ಬಳಿ ಬಂದರು ಮತ್ತು ಅಸ್ಸಲಾಮು ಅಲೈಕುಮ್ ಹೇಳುವ ಬದಲು ಅಸ್ಸಾಮು ಅಲೈಕುಮ್ ಅಂದರು. (ನಿಮಗೆ ಮರಣ ಬರಲಿ-ನವೂದು ಬಿಲ್ಲಾಹ್) ಇದರಿಂದ ಆಯಿಶಾ(ರ) ಕೋಪಗೊಂಡು ಹೀಗೆ ಹೇಳಿದರು, ನಿಮ್ಮ ಮೇಲೆಯೇ ಮರಣ ಬರಲಿ. ನಿಮ್ಮ ಮೇಲೆ ಅಲ್ಲಾಹನ ಶಾಪವಿರಲಿ ಮತ್ತು ಅಲ್ಲಾಹನ ಯಾತನೆ ಎರಗಲಿ.'

ಆದರೆ ಪ್ರವಾದಿವರ್ಯರು(ಸ) ಹೀಗೆ ಹೇಳಿದರು, ''ನಿಲ್ಲು! ಆಯಿಶಾ, ಮೃದು ಧೋರಣೆ ಅನುಸರಿಸು, ಕಠೋರತೆ ಮತ್ತು ಅಸಭ್ಯ ನುಡಿಯಿಂದ ದೂರವಿರು.'' (ಬುಖಾರಿ)

ಯಹ್ಯಾ ಬಿನ್ ಸಯೀದ್ ವರದಿ ಮಾಡಿರುತ್ತಾರೆ. ಒಮ್ಮೆ ಪ್ರವಾದಿ ಈಸಾರ(ಅ) ಮುಂದೆ ಒಂದು ಹಂದಿ ಬಂದಾಗ, ಅವರು ಶಾಂತವಾಗಿ ''ಇಲ್ಲಿಂದ ಹೊರಟುಬಿಡು'' ಎಂದರು. ಆಗ ಜನರು ಈಸಾರೊಡನೆ(ಅ), 'ಎಲ್ಲರೂ ಧಿಕ್ಕರಿಸುವ ಹಂದಿಯೊಡನೆ ಸಹ ನೀವು ಈ ರೀತಿ ಹೇಳುತ್ತೀರಾ?' ಎಂದು ಕೇಳಿದರು. (ಅಂದರೆ ಎಲ್ಲರಂತೆ ನೀವೂ ಅದನ್ನು ಕೆಟ್ಟದಾಗಿ ಧಿಕ್ಕರಿಸುವುದಿಲ್ಲವೇ?)

ಅದಕ್ಕೆ ಈಸಾರು(ಅ) ''ಎಲ್ಲಿ ನನ್ನ ನಾಲಿಗೆಗೆ ಕೆಟ್ಟ ಮಾತುಗಳ ಅಭ್ಯಾಸವಾಗಿ ಬಿಡುವುದೋ ಎಂಬ ಭಯದಿಂದ ಹಾಗೆ ಹೇಳಿದೆ'' ಎಂದರು. (ಮುಅತ್ತಾ)

ಕೆಲವರು ಯಾವುದೇ ಸಂಕಷ್ಟಕ್ಕೆ ಸಿಲುಕಿದರೆ ಸಾಕು, ಕಾಲವನ್ನು ತೆಗಳುವುದಕ್ಕೆ ಷುರು ಮಾಡುತ್ತಾರೆ.

ಪ್ರವಾದಿವರ್ಯರು(ಸ) ಈ ರೀತಿಯ ಕೃತ್ಯಗಳಿಂದ ತಡೆಯುತ್ತಾ ಹೀಗೆ ಹೇಳಿರುವರು:

''ನಿಮ್ಮಲ್ಲಿ ಯಾರೂ ಕಾಲವನ್ನು ದೂಷಿಸಬಾರದು, ಏಕೆಂದರೆ ಕಾಲವು ಸ್ವತಃ ಅಲ್ಲಾಹನಾಗಿದ್ದಾನೆ.'' (ವರದಿ:ಅಬೂಹುರೈರ(ರ)- ಮುಅತ್ತಾ)

ಇದರರ್ಥ ಜಗತ್ತಿನಲ್ಲಿ ನಡೆಯುತ್ತಿರುವುದೆಲ್ಲ ಅಲ್ಲಾಹನ ಆಜ್ಞೆಯಿಂದ ಹೊರತು ಕಾಲದಿಂದಲ್ಲ, ಹೀಗಾಗಿ ನೀವು ಕಾಲವನ್ನು ಕೆಟ್ಟದಾಗಿ ಹೇಳಿದಾಗ ಅದು ಅಲ್ಲಾಹನ ಸನ್ನಿಧಿಯಲ್ಲಿ ನೀವು ಮಾಡುವ ಘೋರ ಪಾಪವಾಗಿದೆ.

ಇನ್ನೂ ಕೆಲವರು ಯಾವುದಾದರೂ ತೊಂದರೆಗೆ ಸಿಲುಕಿದಾಗ ತನ್ನ ಮನಸ್ಸಿನ ಕ್ರೋಧವನ್ನು ತಣಿಸಿಕೊಳ್ಳಲು ಜನರನ್ನು ಹಳಿಯಲು ಆರಂಭಿಸುತ್ತಾರೆ. ತನ್ನ ಮೇಲೆ ಎರಗಿರುವ ಈ ಸಂಕಷ್ಟಕ್ಕೆ ಜನರು ಕಾರಣವಲ್ಲವೆಂದು ಅವರಿಗೂ ತಿಳಿದಿರುತ್ತದೆ. ಅವರು ಕೇವಲ ತಮ್ಮ ಹೃದಯದ ದುಗುಡನ್ನು ತಣಿಸಲು ಮಾತ್ರ ಈ ರೀತಿ ಹೇಳುತ್ತಾರೆ. ಒಂದು ವೇಳೆ ಜನರಿಂದ ಅವರು ಸಂಕಷ್ಟಕ್ಕೆ ಒಳಗಾಗಿದ್ದರೂ ಯಾರದೋ ಒಬ್ಬರ ಅಥವಾ ಕೆಲವರ ತಪ್ಪಾಗಿರಬಹುದೇ ಹೊರತು ಎಲ್ಲರ ತಪ್ಪಾಗಿರಲಿಕ್ಕೆ ಸಾಧ್ಯವಿಲ್ಲ, ಆದರೂ ಜನರು ಕೋಪದಲ್ಲಿ ಎಲ್ಲರನ್ನೂ ಬೈಯುತ್ತಾರೆ.

ಪ್ರವಾದಿ(ಸ) ಇದನ್ನು ಖಂಡಿಸುತ್ತಾ ಹೀಗೆ ಹೇಳಿರುವರು:

''ನಿಮ್ಮ ಪೈಕಿ ಯಾರಾದರೂ ಜನರು ನಾಶವಾಗಲಿ ಎಂದು ಹೇಳಿದರೆ ಎಲ್ಲರಿಗಿಂತ ಹೆಚ್ಚಾಗಿ ಅವನೇ ನಾಶ ಹೊಂದುವನು.'' (ವರದಿ: ಅಬೂಹುರೈರ(ರ)-ಮುಅತ್ತಾ)

*****

# ಶಪಿಸುವುದು

ಪ್ರವಾದಿವರ್ಯರು(ಸ) ಹೇಳಿದರು:

ದಾಸನು ಒಂದು ವಸ್ತುವನ್ನು ಶಪಿಸಿದಾಗ ಆ ಶಾಪವು ಆಕಾಶದತ್ತ ಹೋಗುತ್ತದೆ. ಆದರೆ ಆಕಾಶದ ದ್ವಾರಗಳು ಅದಕ್ಕಾಗಿ ಮುಚ್ಚಲ್ಪಡುತ್ತವೆ. ಮತ್ತೆ ಅದು ಭೂಮಿಯೆಡೆಗೆ ಇಳಿಯುತ್ತದೆ, ಭೂಮಿಯ ದ್ವಾರಗಳು ಸಹ ಅದಕ್ಕಾಗಿ ಮುಚ್ಚಲ್ಪಡುತ್ತವೆ. ಆಗ ಅದು ಎಡ ಬಲಕ್ಕೆ ಸಂಚರಿಸಿ ಯಾವುದೇ ದಾರಿ ಕಾಣದೆ ಯಾರನ್ನು ಶಪಿಸಲಾಗಿದೆಯೋ ಅವನತ್ತ ಬರುತ್ತದೆ. ಅವನು ಅದಕ್ಕೆ ಅರ್ಹನಾಗಿದ್ದರೆ ಸರಿ, ಇಲ್ಲವಾದಲ್ಲಿ ಸ್ವತಃ ಶಪಿಸಿದವನತ್ತಲೇ ಮರಳಿ ಬರುತ್ತದೆ. (ಅಬೂ ದಾವೂದ್- ವರದಿ: ಅಬೂದ್ದರ್ದಾ)

ನಾವು ಶಪಿಸಿರುವವನು ಅದಕ್ಕೆ ಅರ್ಹನಾಗಿಲ್ಲವೆಂದಾದರೆ ಸ್ವತಃ ಶಪಿಸಿದವನು ಅದಕ್ಕೆ ತುತ್ತಾಗುತ್ತಾನೆ. ಹೀಗಾಗಿ ಶಪಿಸುವುದರಿಂದ ದೂರವಿರಬೇಕೆಂದು ಈ ಪ್ರವಾದಿ ವಚನದಲ್ಲಿ ತಿಳಿಸಲಾಗಿದೆ.

ಪ್ರವಾದಿ(ಸ) ಹೇಳಿದರು: ''ಅಲ್ಲಾಹನ ಶಾಪದಿಂದಾಗಲಿ, ಕ್ರೋಧದಿಂದಾಗಲಿ ಮತ್ತು ನರಕದ ಅಗ್ನಿಯಿಂದಾಗಲಿ ಯಾರನ್ನೂ ದೂಷಿಸಬೇಡಿ.''

[ಅಬೂ ದಾವೂದ್-ವರದಿ: ಸಮುರಃ ಬಿನ್ ಜುಂದುಬ್(ರ)]

ಅಂದರೆ ನಿಮ್ಮ ಮೇಲೆ ಅಲ್ಲಾಹನ ಶಾಪವಿರಲಿ, ನಿಮ್ಮ ಮೇಲೆ ಅಲ್ಲಾಹನ ಕ್ರೋಧವಿರಲಿ ಅಥವಾ ನೀವು ನರಕಾಗ್ನಿಯಲ್ಲಿ ಪ್ರವೇಶಿಸಿರಿ ಎಂದು ಹೇಳಬೇಡಿ.

ಸಹೀಹುಲ್ ಮುಸ್ಲಿಮ್‌ನಲ್ಲಿ ಈ ರೀತಿ ಉಲ್ಲೇಖಿಸಲಾಗಿದೆ. ಬನೂ ಉಮಯ್ಯದ ಐದನೆಯ ಖಲೀಫ ಅಬ್ದುಲ್ ಮಲಿಕ್ ಬಿನ್ ಮರ್‌ವಾನ್ ಒಂದು ರಾತ್ರಿ ತನ್ನ ಸೇವಕನನ್ನು ಕರೆದರು. ಅವನು ಬರಲು ಸ್ವಲ್ಪ ತಡಮಾಡಿದ್ದಕ್ಕೆ ಅವನನ್ನು ಶಪಿಸಿದರು. ಇದನ್ನು ಪ್ರವಾದಿವರ್ಯರ(ಸ) ಸಹಾಬಿ ಮಹಿಳೆ ಉಮ್ಮುದ್ದರ್ದಾ(ರ) ಕೇಳಿಸಿಕೊಂಡರು. ಬೆಳಿಗ್ಗೆ ಖಲೀಫರೊಂದಿಗೆ ಹೀಗೆ ಹೇಳಿದರು, ನಿನ್ನೆ ರಾತ್ರಿ ನೀವು ನಿಮ್ಮ ಸೇವಕನನ್ನು ಕರೆಯುವಾಗ ಅವನನ್ನು ಶಪಿಸಿರುವುದನ್ನು ನಾನು ಕೇಳಿಸಿಕೊಂಡೆ. ಪ್ರವಾದಿವರ್ಯರು(ಸ) ಹೀಗೆ ಹೇಳಿರುವುದನ್ನು ನಾನು ಅಬೂದರ್ದಾರಿಂದ ಕೇಳಿರುವೆ. ''ಹೆಚ್ಚು ಶಪಿಸುವವರು

ಕಿಯಾಮತ್‌ನ ದಿನದಂದು ಶಿಫಾರಸು ಮಾಡುವುದಕ್ಕಾಗಲಿ, ಸಾಕ್ಷಿ ಹೇಳಲಿಕ್ಕಾಗಲಿ ಅರ್ಹರಾಗುವುದಿಲ್ಲ.''

ಹಝ್ರತ್ ಅಬೂ ಹುರೈರಾ(ರ) ವರದಿ ಮಾಡಿರುತ್ತಾರೆ. ಪ್ರವಾದಿವರ್ಯರು(ಸ) ಹೀಗೆ ಹೇಳಿದರು. ''ಶಪಿಸುವುದು ಸತ್ಯಸಂಧರಿಗೆ ಶೋಭೆ ತರುವಂತಹದ್ದಲ್ಲ.''

(ಮುಸ್ಲಿಮ್)

ಈ ಹದೀಸ್‌ನ ವ್ಯಾಖ್ಯಾನದಲ್ಲಿ ಈ ರೀತಿ ಹೇಳಲಾಗಿದೆ. ಒಮ್ಮೆ ಅಬೂಬಕರ್‌ರು(ರ) ತಮ್ಮ ಒಬ್ಬ ಗುಲಾಮನನ್ನು ಶಪಿಸುತ್ತಿದ್ದರು. ಅದನ್ನು ಕೇಳಿದ ಪ್ರವಾದಿವರ್ಯರು(ಸ) ''ಶಪಿಸುವುದು ಸತ್ಯಸಂಧ(ಸಿದ್ದೀಕ್)ರಿಗೆ ಶೋಭೆ ತರುವಂತಹದ್ದಲ್ಲ''ವೆಂದರು.

ಮದ್ಯಪಾನ ಮಾಡುವವನನ್ನೂ ಶಪಿಸುವುದರಿಂದ ಪ್ರವಾದಿವರ್ಯರು(ಸ) ತಡೆದಿರುವುದು ಪ್ರವಾದಿವರ್ಯರ(ಸ) ವಚನಗಳಿಂದ ತಿಳಿದು ಬರುತ್ತದೆ.

ಹಝ್ರತ್ ಉಮರ್‌ರು(ರ) ವರದಿ ಮಾಡಿರುತ್ತಾರೆ. ಪ್ರವಾದಿವರ್ಯರ(ಸ) ಕಾಲದಲ್ಲಿ ಅಬ್ದುಲ್ಲಾ ಎಂಬ ಹೆಸರಿನ ಒಬ್ಬ ವ್ಯಕ್ತಿಯಿದ್ದ, ಆದರೆ ಅವನು ಹಿಮಾರ್ (ಕತ್ತೆ) ಎಂಬ ಹೆಸರಿನಿಂದಲೇ ಪ್ರಖ್ಯಾತನಾಗಿದ್ದ ಅವನು ಪ್ರವಾದಿವರ್ಯರನ್ನು(ಸ) ನಗಿಸುವ ಕೆಲಸ ಮಾಡುತ್ತಿದ್ದ. (ಒಮ್ಮೆ ಅವನು ಮದ್ಯಪಾನ ಮಾಡಿದ್ದ) ಪ್ರವಾದಿವರ್ಯರು(ಸ) ಅದಕ್ಕಾಗಿ ಅವನಿಗೆ ಛಡಿಯೇಟು ನೀಡಿದ್ದರು. ಅವನನ್ನು ಮತ್ತೆ ಒಂದು ದಿನ ಮದ್ಯದ ನಶೆಯಲ್ಲಿ ತರಲಾಯಿತು. ಪ್ರವಾದಿವರ್ಯರು(ಸ) ಮತ್ತೆ ಅವನಿಗೆ ಛಡಿಯೇಟು ನೀಡಿದರು. ಆಗ ಜನರ ಪೈಕಿ ಒಬ್ಬ ವ್ಯಕ್ತಿ ಹೀಗೆ ಹೇಳಿದನು, 'ಇವನ ಮೇಲೆ ಅಲ್ಲಾಹನ ಶಾಪವಿರಲಿ, ಅದೆಷ್ಟು ಬಾರಿ ಇವನನ್ನು ಮದ್ಯದ ನಶೆಯಲ್ಲಿ ತರಲಾಗುವುದೋ?'

ಇದನ್ನು ಕೇಳಿದ ಪ್ರವಾದಿವರ್ಯರು(ಸ) ಹೀಗೆ ಹೇಳಿದರು. ''ಅವನನ್ನು ಶಪಿಸದಿರಿ. ದೇವನಾಣೆ! ನನಗೆ ತಿಳಿದಿರುವಂತೆ ಅವನು ಅಲ್ಲಾಹ್ ಮತ್ತು ಅವನ ಪ್ರವಾದಿಯನ್ನು(ಸ) ಪ್ರೀತಿಸುವವನಾಗಿದ್ದಾನೆ.'' (ಬುಖಾರಿ)

ಶಪಿಸುವುದನ್ನು ತನ್ನ ಅಭ್ಯಾಸ ಮಾಡಿಕೊಂಡವರು, ಜನರ ಮೇಲಷ್ಟೇ ಅಲ್ಲ, ಪ್ರಾಣಿ ಹಾಗೂ ನಿರ್ಜೀವ ವಸ್ತುಗಳ ಮೇಲೂ ಸಹ ಶಾಪ ಹಾಕುತ್ತಾರೆ.

ಇಮ್ರಾನ್ ಬಿನ್ ಹುಸೈನ್(ರ) ವರದಿ ಮಾಡಿರುತ್ತಾರೆ. ಪ್ರವಾದಿವರ್ಯರು(ಸ) ಒಮ್ಮೆ ಪ್ರಯಾಣದಲ್ಲಿರುವಾಗ ಯಾರೋ ಶಪಿಸುವುದನ್ನು ಕೇಳಿದರು. ಪ್ರವಾದಿವರ್ಯರು(ಸ) ಆ ಕುರಿತು ವಿಚಾರಿಸಿದಾಗ ಅದು ಒಬ್ಬ ಮಹಿಳೆ ತನ್ನ ಒಂಟೆಯನ್ನು ಶಪಿಸುವುದಾಗಿ ತಿಳಿಸಲಾಯಿತು. ಪ್ರವಾದಿವರ್ಯರು(ಸ) ಹೀಗೆ ಹೇಳಿದರು. ''ಆ ಒಂಟೆಯಿಂದ ಸರಕುಗಳನ್ನು ಕೆಳಗಿಳಿಸಿಬಿಡಿ. ಏಕೆಂದರೆ ಈಗ ಅದು ಶಪಿಸಲ್ಪಟ್ಟಿದೆ.'' ಸಹಾಬಿಗಳು ಹಾಗೆಯೇ ಮಾಡಿದರು. ಇಮ್ರಾನ್‌ರು(ರ) ಹೇಳುತ್ತಾರೆ, ನಾನು ಆ ಒಂಟೆಯನ್ನು

ನೋಡುತ್ತಿದ್ದೆ, ಅದು ಕಪ್ಪಾಗಿ ಹೋಗಿರುವ ಹಾಗೆ ಕಾಣಿಸುತ್ತಿತ್ತು. (ಅಬೂ ದಾವೂದ್)

ಈ ಹದೀಸ್‌ನ ವ್ಯಾಖ್ಯಾನದಲ್ಲಿ ಈ ರೀತಿ ಹೇಳಲಾಗಿದೆ. ತಾನು ಸವಾರಿಯಾಗಿ ಉಪಯೋಗಿಸುತ್ತಿರುವ ಒಂಟೆಯನ್ನೇ ಶಪಿಸಿ ನಂತರ ಮತ್ತೆ ಅದರ ಮೇಲೆಯೇ ಸವಾರಿ ಮಾಡುವುದು ಸರಿಯಲ್ಲವೆಂದು ಆ ಮಹಿಳೆಯನ್ನು ಎಚ್ಚರಿಸುವುದು ಪ್ರವಾದಿವರ್ಯರ(ಸ) ಮಾತಿನ ಅರ್ಥವಾಗಿತ್ತು.

ಹಝ್ರತ್ ಇಬ್ನು ಅಬ್ಬಾಸ್(ರ) ವರದಿ ಮಾಡಿರುತ್ತಾರೆ. ಪ್ರವಾದಿವರ್ಯರ(ಸ) ಮುಂದೆ ಒಬ್ಬ ವ್ಯಕ್ತಿಯು ಗಾಳಿಯನ್ನು ಶಪಿಸಿದ. ಆಗ ಪ್ರವಾದಿವರ್ಯರು(ಸ) ಹೀಗೆ ಹೇಳಿದರು, ''ಗಾಳಿಯನ್ನು ಶಪಿಸಬೇಡ. ಅದು ಅಲ್ಲಾಹನ ಆಜ್ಞೆಯಂತೆ ಬೀಸುತ್ತದೆ. ಯಾರು ಶಾಪಕ್ಕೆ ಅರ್ಹವಲ್ಲದ ವಸ್ತುಗಳ ಮೇಲೆ ಶಾಪ ಹಾಕುತ್ತಾನೋ ಆ ಶಾಪವು ಸ್ವತಃ ಅವನತ್ತ ತಿರುಗಿ ಬರುತ್ತದೆ.'' (ತಿರ್ಮಿದಿ)

*****

# ಚುಚ್ಚು ಮಾತು

'ತಲ್‌ನ್' ಇದು ಅರಬಿ ಪದವಾಗಿದೆ. ಇದರ ಅರ್ಥ ಈಟಿಯಿಂದ ಹೊಡೆಯುವುದಾಗಿದೆ. ಚುಚ್ಚುಮಾತುಗಳನ್ನು ಕೇಳಿದಾಗ ಮನಸ್ಸಿಗೆ ಭಲ್ಲೆಯಿಂದ ಹೊಡೆದಷ್ಟೇ ನೋವಾಗುತ್ತದೆ. ಹೀಗಾಗಿ ಇದನ್ನು ಈಟಿಯಿಂದ ಹೊಡೆಯುವುದಕ್ಕೆ ಹೋಲಿಸಲಾಗಿದೆ ಮತ್ತು ಈ ದುಷ್ಕೃತ್ಯಕ್ಕೆ ತಲಆನಾ ಎಂದು ಹೇಳಲಾಗಿದೆ. ಇದರ ಹಲವಾರು ವಿಧಗಳಿದ್ದು ಎಲ್ಲವೂ ಅಪ್ರಿಯವಾಗಿವೆ.

ಕೆಲವರು ಜನರ ವಂಶಪರಂಪರೆಯ ಕುರಿತು ಚುಚ್ಚು ಮಾತನ್ನಾಡಿದರೆ, ಇನ್ನು ಕೆಲವರು ಉಪಕಾರವೆಸಗಿ ತದನಂತರ ತಾವು ಮಾಡಿದ ಉಪಕಾರಗಳ ಕುರಿತು ಜನರನ್ನು ಪುನಃ ಪುನಃ ನೆನಪಿಸಿ ಚುಚ್ಚು ಮಾತುಗಳನ್ನಾಡುತ್ತಾರೆ. ಒಟ್ಟಿನಲ್ಲಿ ಅದಕ್ಕೆ ಕಾರಣ ಏನೇ ಇದ್ದರೂ ಈ ರೀತಿಯ ಚುಚ್ಚು ನುಡಿಗಳಿಂದ ಮನಸ್ಸಿಗೆ ತುಂಬಾ ನೋವಾಗುತ್ತದೆ. ಚುಚ್ಚು ಮಾತನ್ನಾಡುವುದು ಕೂಡಾ ಪರನಿಂದೆಯೇ ಆಗಿದೆ. ಆದರೆ ಇವುಗಳಲ್ಲಿ ವ್ಯತ್ಯಾಸವೆಂದರೆ, ಪರನಿಂದೆ ಬೆನ್ನಹಿಂದೆ ಮಾಡಲಾಗುತ್ತದೆ. ಆದರೆ ಮೂದಲಿಸುವುದು ಅಥವಾ ಚುಚ್ಚು ಮಾತನ್ನಾಡುವುದು, ಜನರ ಮುಂದೆಯೇ ಮಾಡಲಾಗುತ್ತದೆ.

**''ಸತ್ಯವಿಶ್ವಾಸಿಗಳೇ, ಪುರುಷರು ಇತರ ಪುರುಷರನ್ನು ಅಪಹಾಸ್ಯ ಮಾಡಬಾರದು. ಅವರು ಇವರಿಗಿಂತ ಉತ್ತಮರಿರಲೂಬಹುದು ಮತ್ತು ಸ್ತ್ರೀಯರು ಇತರ ಸ್ತ್ರೀಯರನ್ನೂ ಅಪಹಾಸ್ಯ ಮಾಡಬಾರದು. ಅವರು ಇವರಿಗಿಂತ ಉತ್ತಮರಿರಲೂ ಬಹುದು. ಪರಸ್ಪರರನ್ನು ನಿಂದಿಸಬೇಡಿರಿ ಮತ್ತು ಒಬ್ಬರು ಇನ್ನೊಬ್ಬರನ್ನು ಅಡ್ಡ ಹೆಸರಿನಿಂದ ಕರೆಯಬೇಡಿರಿ. ಸತ್ಯವಿಶ್ವಾಸ ಸ್ವೀಕರಿಸಿದ ಬಳಿಕ ಕರ್ಮಭ್ರಷ್ಟತೆಯಲ್ಲಿ ಹೆಸರು ಗಳಿಸುವುದು ಬಹಳ ಕೆಟ್ಟದು. ಈ ನಿಲುಮೆಯನ್ನು ತೊರೆಯದವರು ಅಕ್ರಮಿಗಳಾಗಿರುವರು.'' (ಪವಿತ್ರ ಕುರ್‌ಆನ್, 49:11)**

ಯಾರು ಜನರ ಮೇಲೆ ಉಪಕಾರ ಮಾಡಿ ಅದನ್ನು ಮತ್ತೆ ಮತ್ತೆ ನೆನಪಿಸಿ ನಿಂದಿಸುತ್ತಾರೋ ಅವರು ತಾವು ಮಾಡಿರುವ ಸತ್ಕರ್ಮಗಳನ್ನು ಕಳೆದುಕೊಳ್ಳುತ್ತಾರೆ. ಅದೇ ರೀತಿ ಯಾರು ಇತರರ ಮುಖಗಳ ಕುರಿತು ನಿಂದಿಸುತ್ತಾನೋ ಅವನು ವಾಸ್ತವದಲ್ಲಿ ಅಲ್ಲಾಹನ ಸನ್ನಿಧಿಯಲ್ಲಿ ಅತ್ಯಂತ ಘೋರ ಪಾಪವೆಸಗುತ್ತಾನೆ. ಏಕೆಂದರೆ ಯಾರೂ ಸಹ ತನ್ನ ಮುಖ, ಚಹರೆಗಳನ್ನು ತಾವೇ ಸೃಷ್ಟಿಸಿಕೊಳ್ಳಲು ಸಾಧ್ಯವಿಲ್ಲ. ಹಾಗೆಯೇ ಇತರರ

ವಂಶಪರಂಪರೆಯ ಬಗ್ಗೆ ಜನರನ್ನು ನಿಂದಿಸುವುದು ಸಹ ಅಜ್ಞಾನದ ಪರಮಾವಧಿಯಾಗಿದೆ. ಏಕೆಂದರೆ ಅದೂ ಸಹ ಮನುಷ್ಯನು ತಾನು ಆಯ್ಕೆ ಮಾಡಿಕೊಂಡದ್ದಲ್ಲ

ಹಝ್ರತ್ ಉಬೈದುಲ್ಲಾ ವರದಿ ಮಾಡುತ್ತಾರೆ. ಹಝ್ರತ್ ಅಬ್ದುಲ್ಲಾ ಬಿನ್ ಅಬ್ಬಾಸ್(ರ) ಹೀಗೆ ಹೇಳಿರುವರು. ಜನರ ವಂಶಪರಂಪರೆಯ ಕುರಿತು ನಿಂದಿಸುವುದು ಮತ್ತು ಶವಗಳ ಮೇಲೆ ರೋದಿಸುವುದು ಅಜ್ಞಾನಿಗಳ ಲಕ್ಷಣಗಳಾಗಿವೆ. ಅವರು ಮೂರನೆಯದರ ಕುರಿತು ಹೇಳಿದರು. ಆದರೆ ಉಬೈದುಲ್ಲಾ ಅದನ್ನು ಮರೆತು ಬಿಟ್ಟರು. (ಬುಖಾರಿ)

ಹಝ್ರತ್ ಅಬೂದರ್(ರ) ವರದಿ ಮಾಡಿರುತ್ತಾರೆ. ನಾನು ಒಬ್ಬ ವ್ಯಕ್ತಿ (ನನ್ನ ಗುಲಾಮ)ಯನ್ನು ಬೈದು ಅವನನ್ನು ಅವನ ತಾಯಿಯ ಹೆಸರು ಹೇಳಿ ನಿಂದಿಸಿದೆ. ಆಗ ಪ್ರವಾದಿ(ಸ) ನನ್ನನ್ನು ಕರೆದು ಹೀಗೆ ಹೇಳಿದರು. "ಓ ಅಬೂದರ್! ನೀವು ಅವನನ್ನು ಅವನ ತಾಯಿಯ ಹೆಸರಿನಲ್ಲಿ ನಿಂದಿಸಿರುವಿರಾ? ನಿಸ್ಸಂದೇಹವಾಗಿ ನಿಮ್ಮಲ್ಲಿ ಇನ್ನೂ ಅಜ್ಞಾನ ಕಾಲದ ಪ್ರಭಾವ ಹಾಗೆಯೇ ಉಳಿದುಕೊಂಡಿದೆ." (ಬುಖಾರಿ)

*****

# ರೋದಿಸುವುದು

ಶವಗಳ ಮೇಲೆ ರೋದಿಸುವುದು ನಾಲಗೆಯ ಅತ್ಯಂತ ಕೆಟ್ಟ ದುರ್ಬಳಕೆಯಾಗಿದೆ. ನಮ್ಮ ಆತ್ಮೀಯರು ಮರಣಹೊಂದಿ ನಮ್ಮನ್ನು ಆಗಲಿದ ಕ್ಷಣವು ಅತ್ಯಂತ ದುಃಖ ದಾಯಕವಾಗಿರುತ್ತದೆ. ಆಗ ಕಣ್ಣೀರು ಹರಿಯುವುದು ಸ್ವಾಭಾವಿಕ. ಪ್ರವಾದಿವರ್ಯರು(ಸ) ಸಹ ಅವರ ಆತ್ಮೀಯರು ಆಗಲಿದಾಗ ಕಣ್ಣೀರು ಸುರಿಸಿದ್ದಾರೆ. ಆದರೆ ನಾಲಗೆಯಿಂದ ಮಾತ್ರ ಅಲ್ಲಾಹನಿಗೆ ಅಪ್ರಿಯವಾಗುವಂತಹ ಯಾವುದೇ ನುಡಿಗಳನ್ನು ಹೊರಡಿಸದಿರುವುದೇ ಪ್ರವಾದಿವರ್ಯರ(ಸ) ಚರ್ಯೆಯಾಗಿದೆ.

ಅಬ್ದುಲ್ಲಾ ಬಿನ್ ಉಮರ್(ರ) ಈ ರೀತಿ ವರದಿ ಮಾಡಿರುತ್ತಾರೆ.

ಸಅದ್ ಬಿನ್ ಉಬಾದರು(ರ) ಮರಣಶಯ್ಯೆಯಲ್ಲಿರುವಾಗ ಪ್ರವಾದಿ(ಸ), ಅಬ್ದುರ್ರಹ್ಮಾನ್ ಬಿನ್ ಔಫ್(ರ), ಸಅದ್ ಬಿನ್ ಅಬೀ ವಕ್ಕಾಸ್(ರ) ಹಾಗೂ ಅಬ್ದುಲ್ಲಾ ಬಿನ್ ಮಸ್‌ಊದ್‌ರು(ರ) ಅವರ ಸಂದರ್ಶನಕ್ಕೆಂದು ಬಂದರು. ಆಗ ಸಅದ್ ಬಿನ್ ಉಬಾದರು(ರ) ಮಲಗಿರುವುದನ್ನು ಕಂಡ ಪ್ರವಾದಿ(ಸ) ಜೀವ ಹೋಗಿದೆಯೇ? ಎಂದು ಕೇಳಿದರು. ಸಹಾಬಿಗಳು ಇಲ್ಲವೆಂದು ಉತ್ತರಿಸಿದರು. (ದುಃಖದಿಂದ) ಪ್ರವಾದಿವರ್ಯರು(ಸ) ಕಣ್ಣೀರು ಸುರಿಸುತ್ತಿರುವುದನ್ನು ಕಂಡು ಸಹಾಬಿಗಳು ಸಹ ಕಣ್ಣೀರು ಸುರಿಸಲು ಆರಂಭಿಸಿದರು. ಪ್ರವಾದಿವರ್ಯರು(ಸ) ಹೇಳಿದರು, ನೀವು ಕೇಳುವುದಿಲ್ಲವೇ? ಅಲ್ಲಾಹನು ಕಣ್ಣೀರು ಸುರಿಸುವುದರಿಂದ ಮತ್ತು ಮನಸ್ಸು ದುಃಖತಪ್ತವಾಗುವುದರಿಂದ ಯಾತನೆ ನೀಡುವುದಿಲ್ಲ, ಬದಲಾಗಿ, ಇದರಿಂದಾಗಿ ಶಿಕ್ಷೆ ನೀಡುತ್ತಾನೆ ಅಥವಾ ಕರುಣೆ ತೋರುತ್ತಾನೆ ಎನ್ನುತ್ತಾ ತಮ್ಮ ನಾಲಗೆಯತ್ತ ಸನ್ನೆ ಮಾಡಿದರು. (ಬುಖಾರಿ)

ಅಜ್ಞಾನದ ಕಾಲದಲ್ಲಿ ಶವಗಳ ಮೇಲೆ ರೋದಿಸುವುದರ ಸಂಪ್ರದಾಯ ಹೆಚ್ಚಾಗಿತ್ತು. ಕೆಲವು ಭಾಗಗಳಿಂದ ತಿಳಿದು ಬರುವುದೇನೆಂದರೆ, ಬಹುಶಃ ಅವರ ಬಳಿ ಶೋಕಾಚರಣೆಯ ಸಾಲಸಂದಾಯ ಪದ್ಧತಿಯೂ ರೂಢಿಯಲ್ಲಿತ್ತು. ಉದಾಹರಣೆಗೆ ಒಬ್ಬ ಹೆಂಗಸು ಇನ್ನೊಬ್ಬ ಹೆಂಗಸಿನ ಆತ್ಮೀಯರು ಮಡಿದಾಗ ರೋದಿಸಿದ್ದರೆ, ಆ ಹೆಂಗಸು ಅದರ ಬದಲಾಗಿ ಮೊದಲನೆಯ ಹೆಂಗಸಿನ ಆತ್ಮೀಯರು ಮಡಿದಾಗ ರೋದಿಸಬೇಕೆಂದು ಅಪೇಕ್ಷಿಸುತ್ತಿದ್ದರು.

ಹಝ್ರತ್ ಉಮ್ಮು ಅತಿಯ್ಯಾ(ರ) ವರದಿ ಮಾಡುತ್ತಾರೆ, ನಾವೆಲ್ಲ ಪ್ರವಾದಿವರ್ಯರಲ್ಲಿ(ಸ) ಬೈಅತ್ (ಕರಾರು) ಮಾಡಿದೆವು. ಪ್ರವಾದಿವರ್ಯರು(ಸ) ನಮ್ಮ ಮುಂದೆ ''ಅನ್ ಲಾ ಯುಶ್ರಿಕ್‌ನ ಬಿಲ್ಲಾಹಿ ಶೈಅನ್'' ಎಂಬ ಕುರ್‌ಆನ್ ಸೂಕ್ತ ಪಠಿಸಿದರು ಮತ್ತು ನಮಗೆ ಶವಗಳ ಮೇಲೆ ರೋದಿಸದಿರುವಂತೆ ಉಪದೇಶಿಸಿದರು. ಆಗ ಒಬ್ಬ ಹೆಂಗಸು ತನ್ನ ಕೈಯನ್ನು ಹಿಂದಕ್ಕೆ ಎಳೆದುಕೊಂಡು ಹೀಗೆ ಹೇಳಿದಳು: ಒಬ್ಬ ಹೆಂಗಸು ನನ್ನ ಆತ್ಮೀಯರೊಬ್ಬರು ಮರಣಹೊಂದಿದಾಗ ರೋದಿಸುವುದರಲ್ಲಿ ನನಗೆ ಸಹಾಯ ಮಾಡಿದ್ದಳು. ನಾನು ಅದರ ಋಣ ತೀರಿಸಬೇಕಾಗಿದೆ ಎನ್ನುತ್ತಾ ಅಲ್ಲಿಂದ ಹೊರಟು ಹೋದಳು. ಪ್ರವಾದಿವರ್ಯರು(ಸ) ಏನೂ ಹೇಳದೆ ಸುಮ್ಮನಾದರು. ಆ ಹೆಂಗಸು ಮತ್ತೆ ಮರಳಿ ಬಂದಾಗ ಪ್ರವಾದಿವರ್ಯರು(ಸ) ಅವಳಿಂದ ಬೈಅತ್(ಕರಾರು) ಪಡೆದುಕೊಂಡರು. (ಬುಖಾರಿ)

ಇಸ್ಲಾಮ್ ಬಂದ ನಂತರ ಅಜ್ಞಾನ ಕಾಲದ ಎಲ್ಲ ಕೆಟ್ಟ ಸಂಪ್ರದಾಯಗಳನ್ನು ನಿಷೇಧಿಸಲಾಯಿತು. ಅದರ ಜೊತೆಯಲ್ಲಿ ಶವಗಳ ಮೇಲೆ ರೋದಿಸುವುದನ್ನೂ ನಿಷೇಧಿಸಲಾಯಿತು.

ಪ್ರವಾದಿ (ಸ) ಹೀಗೆ ಹೇಳಿರುವರು:

''ಮುಖಕ್ಕೆ ಬಡಿದುಕೊಳ್ಳುವ, ಬಟ್ಟೆಗಳನ್ನು ಪರಚುವ, ಅಜ್ಞಾನ ಕಾಲದ ರೂಢಿಯಂತೆ ಚೀರಾಡುವವರು ನಮ್ಮವರಲ್ಲ.'' (ಬುಖಾರಿ)

ಹಝ್ರತ್ ಆಯಿಶಾರು(ರ) ವರದಿ ಮಾಡಿರುತ್ತಾರೆ.

ಹಝ್ರತ್ ಝೈದ್ ಬಿನ್ ಹಾರಿಸ್(ರ), ಹಝ್ರತ್ ಜಾಫರ್ (ತಯ್ಯಾರ್)(ರ) ಮತ್ತು ಹಝ್ರತ್ ಅಬ್ದುಲ್ಲಾ ಬಿನ್ ರವಾಹ್‌ರು(ರ) ಹುತಾತ್ಮರಾಗಿರುವ ವಿಷಯ ಪ್ರವಾದಿವರ್ಯರಿಗೆ(ಸ) ತಲುಪಿದಾಗ ಅವರು ಕುಳಿತಿದ್ದರು ಮತ್ತು ಅವರ ಮುಖದ ಮೇಲೆ ದುಃಖದ ಛಾಯೆಯಿತ್ತು. ನಾನು ದ್ವಾರದ ತೂತಿನಿಂದ ಇಣುಕಿ ನೋಡುತ್ತಿದ್ದೆ. ಪ್ರವಾದಿವರ್ಯರ(ಸ) ಬಳಿ ಒಬ್ಬ ವ್ಯಕ್ತಿ ಬಂದು ಹಝ್ರತ್ ಜಾಫರ್ ತಯ್ಯಾರ್‌ರ(ರ) ಮನೆಯ ಹೆಂಗಸರು ರೋದಿಸುತ್ತಿರುವುದನ್ನು ತಿಳಿಸಿದ. ಪ್ರವಾದಿ(ಸ) ಅವರನ್ನು ಆ ರೀತಿ ಮಾಡದಂತೆ ತಡೆಯಿರಿ ಎಂದು ಹೇಳಿ ಕಳುಹಿಸಿದರು. ಆ ವ್ಯಕ್ತಿ ಹೋಗಿ ಕೆಲ ಸಮಯದ ನಂತರ ಮತ್ತೆ ಬಂದು ನಾನು ಅವರನ್ನು ತಡೆದರೂ ಅವರು ನನ್ನ ಮಾತು ಕೇಳದೆ, ಅದೇ ರೀತಿ ಮಾಡುತ್ತಿರುವುದಾಗಿ ತಿಳಿಸಿದ. ಪ್ರವಾದಿವರ್ಯರು(ಸ) ಮತ್ತೊಮ್ಮೆ ಅವರನ್ನು ಹಾಗೆ ಮಾಡದಂತೆ ತಡೆಯಿರಿ ಎಂದು ಹೇಳಿ ಕಳುಹಿಸಿದರು. ಆ ವ್ಯಕ್ತಿಯು ಮರಳಿ ಬಂದು ಅಲ್ಲಾಹನಾಣೆ! ಅವರು ನನ್ನ ಮಾತು ಕೇಳುತ್ತಿಲ್ಲ ಎಂದನು. (ಈ ಮಾತು ತಿಳಿಸುತ್ತಾ ಆಯಿಶಾರು(ರ) ಹೇಳುತ್ತಾರೆ) ನನಗೆ ತಿಳಿದಿರುವಂತೆ ಆಗ ಪ್ರವಾದಿವರ್ಯರು(ಸ) (ಹೋಗಿ) ಅವರ ಮುಖದ ಮೇಲೆ ಮಣ್ಣು ಹಾಕಿರಿ ಎಂದರು. (ಬುಖಾರಿ)

# ಮುಖಸ್ತುತಿ

ಹ. ಅಬೂ ಮೂಸಾರಿಂದ(ಅ) ವರದಿಯಾಗಿದೆ. ಪ್ರವಾದಿವರ್ಯರು(ಸ), ಒಬ್ಬನು ಇನ್ನೊಬ್ಬನ ಗುಣಗಾನ ಹಾಗೂ ಮುಖಸ್ತುತಿ ಮಾಡುವುದನ್ನು ಕಂಡರು. ಆಗ ಪ್ರವಾದಿವರ್ಯರು(ಸ) ''ನೀನು(ಆ ವ್ಯಕ್ತಿಯ ಮುಖಸ್ತುತಿಗೈದು) ಆತನನ್ನು ನಾಶ ಮಾಡಿದೆ ಅಥವಾ(ಹೀಗೆ ಹೇಳಿದರು) ನೀನು ಆ ವ್ಯಕ್ತಿಯ ಸೊಂಟ ಮುರಿದೆ.'' (ಬುಖಾರಿ)

ಅರ್ಥಾತ್, ಮುಖಸ್ತುತಿಯು ಆ ವ್ಯಕ್ತಿಯನ್ನು ಅಹಂಕಾರಿಯನ್ನಾಗಿ ಮಾರ್ಪಡಿಸುತ್ತದೆ ಹಾಗೂ ಅಹಂಕಾರವು ಆ ವ್ಯಕ್ತಿಯನ್ನು ನಾಶದ ಕಡೆ ಒಯ್ಯುತ್ತದೆ.

ಹ. ಅಬೂಬಕರ್(ರ) ಹೇಳುತ್ತಾರೆ. ಒಮ್ಮೆ ಒಬ್ಬ ವ್ಯಕ್ತಿಯು ಪ್ರವಾದಿವರ್ಯರ(ಸ) ಸನ್ನಿಧಿಯಲ್ಲಿ ಇನ್ನೊಬ್ಬನ ಮುಖಸ್ತುತಿ ಮಾಡಿದನು. (ಆ ವ್ಯಕ್ತಿಯೂ ಆ ಸಭೆಯಲ್ಲಿದ್ದರು) ಪ್ರವಾದಿ(ಸ) ಮುಖಸ್ತುತಿ ಮಾಡುತ್ತಿದ್ದ ವ್ಯಕ್ತಿಯೊಡನೆ- ''ನೀವು ನಿಮ್ಮ ಸಹೋದರನ ಕೊರಳು ಕೊಯ್ದಿರಿ'' ಎಂದು ಮೂರು ಸಲ ಆವರ್ತಿಸಿದರು. ತರುವಾಯ ಹೀಗೆಂದರು- ''ನಿಮ್ಮ ಪೈಕಿ ಯಾರಾದರೂ ಇನ್ನೊಬ್ಬನನ್ನು ಹೊಗಳುವುದಾದರೆ ಮತ್ತು ಹಾಗೆ ಹೊಗಳುವುದು ಅಗತ್ಯವೆಂದು ಮನಗಂಡರೆ ಅವನು ಹೀಗೆನ್ನಲಿ-ನಾನು ಇಂತಿಂತಹ ವ್ಯಕ್ತಿಯನ್ನು ಹೀಗೆ ಭಾವಿಸಿದ್ದೇನೆ, ವಾಸ್ತವಿಕತೆಯನ್ನು ಅಲ್ಲಾಹನೇ ಬಲ್ಲ, ವಾಸ್ತವದಲ್ಲಿ ಹಾಗೆ ಭಾವಿಸುವುದಿದ್ದರೆ, ಯಾರನ್ನೂ ಅಲ್ಲಾಹನ ಹೊರತು ಪಾವನನೆಂದು ಬಗೆಯಬಾರದು.'' (ಬುಖಾರಿ)

ಹರ್ಝ್ರತ್ ಮುಆವಿಯರು(ರ) ವರದಿ ಮಾಡಿರುತ್ತಾರೆ. ಪ್ರವಾದಿವರ್ಯರು(ಸ) ಹೇಳಿದರು, ''ನೀವು ಪರಸ್ಪರ ಮುಖಸ್ತುತಿ ಮಾಡುವುದರಿಂದ ದೂರಿವಿರಿ, ಅದಂತೂ ಕೊರಳು ಕೊಯ್ಯುವುದಕ್ಕೆ ಸಮಾನವಾಗಿದೆ.'' (ಇಬ್ನು ಮಾಜ:)

ಇಲ್ಲಿ ತಡೆಯಲಾಗಿರುವುದು ಹೊಗಳುವುದರಲ್ಲಿ ಅತಿರೇಕವೆಸಗುವುದನ್ನು. ಆದ್ದರಿಂದ ಯಾರನ್ನು ಹೊಗಳಲಾಗುತ್ತದೋ ಅವನ ಮನಸ್ಸಲ್ಲಿ ಅಹಂಕಾರ ಮತ್ತು ಅಹಂಭಾವದ ಮನೋಭಾವವು ಮೂಡುತ್ತದೆ. ಹೀಗಾಗಿ ಅದು ಅವನನ್ನು ವಿನಾಶದೆಡೆಗೆ ಒಯ್ಯುತ್ತದೆ.

ಇತರರನ್ನು ಹುರಿದುಂಬಿಸಲಿಕ್ಕಾಗಿ ಸಮತೋಲನದಿಂದ ಕೂಡಿರುವ ನೈಜ ಹೊಗಳಿಕೆಯ ಮಾತುಗಳನ್ನಾಡುವುದು ತಪ್ಪಲ್ಲ, ಪ್ರವಾದಿವರ್ಯರು(ಸ) ಸಹ ಹೊಗಳಿಕೆಗೆ

ಅರ್ಹರಾಗಿರುವವರನ್ನು ಹೊಗಳುತ್ತಿದ್ದರು. ಆದರೆ ಮನುಷ್ಯನಲ್ಲಿ ಅಹಂಕಾರದ ಭಾವಕ್ಕೆ ಕಾರಣವಾಗುವಂತಹ ಹೊಗಳಿಕೆಯು ಪ್ರವಾದಿವರ್ಯ‌ರಿಗೆ(ಸ) ಅಪ್ರಿಯವಾಗಿತ್ತು.

ತನ್ನನ್ನು ಹೊಗಳಿಸಿಕೊಂಡು ಖುಷಿಪಡುವ ಹಲವಾರು ನಾಯಕರು, ದೊರೆಗಳು, ಶ್ರೀಮಂತರು ನಮಗೆ ಇತಿಹಾಸದಲ್ಲಿ ಕಾಣಸಿಗುತ್ತಾರೆ. ಅಲ್ಲಿ ಹೊಗಳುವುದನ್ನೇ ತಮ್ಮ ಕಾಯಕ ಮಾಡಿಕೊಂಡಿರುವವರ ಒಂದು ಗುಂಪಿರುತ್ತಿತ್ತು. ಅವರು ತಮ್ಮ ಒಡೆಯರ, ದೊರೆಗಳ ಸುಳ್ಳು ಪ್ರಶಂಸೆ ಮಾಡಿ ಬಹುಮಾನಗಳನ್ನು ಪಡೆದುಕೊಳ್ಳುತ್ತಿದ್ದರು. ಕವಿತೆಯಲ್ಲಿ ಖಸೀದಾ ಎಂಬ ಒಂದು ಪ್ರಕಾರವಿದೆ. ಅದರಲ್ಲಿ ಕವಿಗಳು ತಮ್ಮ ಒಡೆಯರ ಪ್ರಶಂಸೆಗಳ ಸುರಿಮಳೆಗೈದು ಅವರಲ್ಲಿರದಂತಹ ಗುಣಗಳ ಬಗ್ಗೆ ಹೇಳಿ ಅವರನ್ನು ಮನುಷ್ಯರಿಗಿಂತ ಉನ್ನತ ಸ್ಥಾನಕ್ಕೆ ಒಯ್ಯುತ್ತಾರೆ. ಈ ರೀತಿಯ ಮುಖಸ್ತುತಿಯನ್ನು ಇಸ್ಲಾಮಿನಲ್ಲಿ ಅಪ್ರಿಯವೆಂದು ಸಾರಲಾಗಿದೆ.

ಹಝ್ರತ್ ಅಬೂ ಮಅಮರ್(ರ) ವರದಿ ಮಾಡುತ್ತಾರೆ. ಒಬ್ಬ ವ್ಯಕ್ತಿಯು ತನ್ನ ನಾಯಕರ ಪೈಕಿ ಒಬ್ಬ ನಾಯಕನನ್ನು ಹೊಗಳುತ್ತಿದ್ದುದನ್ನು ಕಂಡ ಮಿಖ್‌ದಾದ್‌ರು(ರ) ಅವನ ಮೇಲೆ ಮಣ್ಣು ಹಾಕಿದರು ಮತ್ತು ಈ ರೀತಿ ಹೇಳಿದರು. ಪ್ರವಾದಿವರ್ಯ‌ರು(ಸ) ನಮಗೆ ಹೊಗಳುವವರನ್ನು ಕಂಡರೆ ಮಣ್ಣು ಹಾಕುವಂತೆ ಆದೇಶಿಸಿದ್ದಾರೆ. **(ಮುಸ್ಲಿಮ್)**

*****

# ನಾಲಗೆಯ ಇತರ ಕೆಲವು ಪಾಪಗಳು

ನಾಲಗೆಯಿಂದಲೇ ಸಂಭವಿಸುವಂತಹ ಇನ್ನೂ ಕೆಲವು ಅಪ್ರಿಯ ಪಾಪಗಳಿವೆ. ಅಪಹಾಸ್ಯ ಮಾಡುವುದು, ಅಹಂಕಾರ ಮತ್ತು ದರ್ಪದ ಮಾತುಗಳನ್ನಾಡುವುದು. ಇತರರನ್ನು 'ಕಾಫಿರ್'' ಎಂದು ಕರೆಯುವುದು ಇತ್ಯಾದಿ. ಈ ಎಲ್ಲಾ ದುಷ್ಕರ್ಮಗಳು ಅಲ್ಲಾಹ್ ಮತ್ತು ಪ್ರವಾದಿವರ್ಯರ(ಸ) ದೃಷ್ಟಿಯಲ್ಲಿ ಅತ್ಯಂತ ಅಪ್ರಿಯವಾದವುಗಳಾಗಿವೆ. ಒಬ್ಬ ಮೂಮಿನ್ ಎಂಬ ನೆಲೆಯಲ್ಲಿ ಸಾಧ್ಯವಿರುವಷ್ಟು ಇವುಗಳಿಂದ ದೂರವಿರಲು ಪ್ರಯತ್ನಿಸುವುದು ಅವಶ್ಯಕವಾಗಿದೆ.

ಪವಿತ್ರ ಕುರ್‌ಆನಿನಲ್ಲಿ ಅಲ್ಲಾಹನು ಸತ್ಯವಿಶ್ವಾಸಿಗಳನ್ನು ಕುರಿತು ನಾಲಗೆ ಸಂರಕ್ಷಣೆಗೆ ಸಂಬಂಧಿಸಿದ ಹಲವು ನಿರ್ದೇಶನಗಳನ್ನು ನೀಡಿದ್ದಾನೆ.

**''ಸತ್ಯ ವಿಶ್ವಾಸಿಗಳೇ, ಪುರುಷರು ಇತರ ಪುರುಷರನ್ನು ಪರಿಹಾಸ್ಯ ಮಾಡಬಾರದು. ಅವರು ಇವರಿಗಿಂತ ಉತ್ತಮರಿರಲೂಬಹುದು ಮತ್ತು ಸ್ತ್ರೀಯರು ಇತರ ಸ್ತ್ರೀಯರನ್ನು ಪರಿಹಾಸ್ಯ ಮಾಡಬಾರದು. ಅವರು ಇವರಿಗಿಂತ ಉತ್ತಮರಿರಲೂಬಹುದು. ಪರಸ್ಪರರನ್ನು ನಿಂದಿಸಬೇಡಿರಿ ಮತ್ತು ಒಬ್ಬರು ಇನ್ನೊಬ್ಬರನ್ನು ಅಡ್ಡ ಹೆಸರಿನಿಂದ ಕರೆಯಬೇಡಿರಿ. ಸತ್ಯವಿಶ್ವಾಸ ಸ್ವೀಕರಿಸಿದ ಬಳಿಕ ಕರ್ಮಭ್ರಷ್ಟತೆಯಲ್ಲಿ ಹೆಸರು ಗಳಿಸುವುದು ಬಹಳ ಕೆಟ್ಟದು. ಈ ನಿಲುಮೆಯನ್ನು ತೊರೆಯದವರು ಅಕ್ರಮಿಗಳಾಗಿರುವರು.''(ಪವಿತ್ರ ಕುರ್‌ಆನ್, 49:11)**

ಅಬ್ದುಲ್ಲಾ ಬಿನ್ ಉಮರ್(ರ) ವರದಿ ಮಾಡಿರುತ್ತಾರೆ. ಪ್ರವಾದಿವರ್ಯರು(ಸ) ಹೀಗೆ ಹೇಳಿದರು. ''ನಿಮ್ಮಲ್ಲಿ ಯಾರಾದರೂ ತನ್ನ ಮುಸ್ಲಿಮ್ ಸಹೋದರನನ್ನು ಕಾಫಿರ್ ಎಂದು ಕರೆದರೆ, ಇಬ್ಬರ ಪೈಕಿ ಒಬ್ಬನು ಖಂಡಿತವಾಗಿ ಕಾಫಿರ್(ಸತ್ಯನಿಷೇಧಿ) ಆಗಿರುತ್ತಾನೆ.

**(ಮುಅತ್ತಾ)**

ಅಂದರೆ ಯಾರನ್ನು ಕಾಫಿರ್ ಎಂದು ಕರೆಯಲಾಗಿದೆಯೋ ಅವನು ವಾಸ್ತವದಲ್ಲಿ ಕಾಫಿರ್ ಆಗಿರದೇ ಇದ್ದಲ್ಲಿ ತನ್ನ ಮುಸ್ಲಿಮ್ ಸಹೋದರನನ್ನು ಆ ರೀತಿ ಕರೆದವನೇ ಕಾಫಿರ್ ಆಗುತ್ತಾನೆ.

ಪವಿತ್ರ ಕುರ್‌ಆನಿನಲ್ಲಿ ಅಹಂಕಾರ ಮತ್ತು ದರ್ಪವನ್ನು ಖಂಡಿಸುತ್ತಾ ಅಲ್ಲಾಹನು ಹೀಗೆ ಹೇಳಿದ್ದಾನೆ.

''ಜನರೊಡನೆ ಮುಖ ತಿರುಗಿಸಿ ಮಾತಾಡಬೇಡ. ಭೂಮಿಯ ಮೇಲೆ ದರ್ಪದಿಂದ ನಡೆಯಬೇಡ, ದುರಭಿಮಾನ ಹಾಗೂ ಅಹಂಕಾರ ಪಡುವವನನ್ನು ಅಲ್ಲಾಹನು ಮೆಚ್ಚುವುದಿಲ್ಲ.'' (ಪವಿತ್ರ ಕುರ್‌ಆನ್, 31:18)

*****

# ಮೌನದ ಮಹತ್ವ

ನಾಲಗೆಯನ್ನು ನಿಯಂತ್ರಿಸಲಾಗದೇ ಮನುಷ್ಯನು ಹಲವಾರು ಪಾಪಗಳನ್ನು ಎಸಗುತ್ತಾನೆ. ಹೀಗಾಗಿ ಬುದ್ಧಿಜೀವಿಗಳು ನಾಲಗೆಯ ಸಂರಕ್ಷಣೆಯ ಜೊತೆಗೆ ಅಗತ್ಯವಿದ್ದಲ್ಲಿ ಮೌನವಹಿಸುವುದರ ಮಹತ್ವವನ್ನು ತಿಳಿಸಿದ್ದಾರೆ.

ಮನುಷ್ಯ ಕಡಿಮೆ ಮಾತಾಡಿದಷ್ಟು ಅವನ ನಾಲಗೆ ತಪ್ಪೆಸಗುವ ಸಾಧ್ಯತೆ ಕಡಿಮೆಯಾಗುತ್ತದೆ ಎಂಬುದು ಸ್ಪಷ್ಟ.

ಮನುಷ್ಯನು ಅಗತ್ಯವಿದ್ದಾಗಲೂ ಸುಮ್ಮನಿರಬೇಕೆಂದಲ್ಲ, ನಾಲಗೆಯಿಂದ ಹಲವಾರು ಪಾಪಗಳು ಸಂಭವಿಸುತ್ತವೆ ನಿಜ. ಆದರೆ ಅದೇ ನಾಲಗೆಯಿಂದ ಸತ್ಕರ್ಮಗಳು ಕೂಡಾ ಆಗುತ್ತವೆ. ಜನರಿಗೆ ಸೂಕ್ತ ಮಾರ್ಗದರ್ಶನ ಮಾಡುವುದು. ದುಃಖಿತರಿಗೆ ಸಾಂತ್ವನ ನೀಡುವುದು. ಕುರ್‌ಆನ್ ಪಠಿಸುವುದು ಮತ್ತು ಕಲಿಸುವುದು ಇತ್ಯಾದಿ.

ಇಲ್ಲಿ ಮೌನದ ಮಹತ್ವವನ್ನು ಪ್ರಸ್ತಾಪಿಸಲಾಗಿರುವ ಉದ್ದೇಶ ನಾಲಗೆಯ ಅನಗತ್ಯ ಬಳಕೆಯಿಂದ ಮನುಷ್ಯನು ಹಲವಾರು ಅಪಾಯಗಳಿಂದ ಪಾರಾಗಬಹುದೆಂದು ತಿಳಿಸುವುದಾಗಿದೆ. ಪ್ರವಾದಿವರ್ಯರು(ಸ) ಹೀಗೆ ಹೇಳಿರುವರು: ''ಮೌನಪಾಲಿಸುವವನು ಮುಕ್ತಿ ಪಡೆದನು.'' (ವರದಿ: ಅಬ್ದುಲ್ಲಾ ಬಿನ್ ಉಮರ್(ರ)- ತಿರ್ಮಿದಿ)

ಅಬೂಹುರೈರರು(ರ) ವರದಿ ಮಾಡಿರುತ್ತಾರೆ. ಪ್ರವಾದಿವರ್ಯರು(ಸ) ಹೀಗೆ ಹೇಳಿದರು: ''ಅಲ್ಲಾಹನ ಮೇಲೆ ಹಾಗೂ ಪರಲೋಕದ ಮೇಲೆ ವಿಶ್ವಾಸವುಳ್ಳವನು ತನ್ನ ನೆರೆಯವರಿಗೆ ಕಿರುಕುಳ ನೀಡಬಾರದು. ಅಲ್ಲಾಹನ ಮೇಲೆ ಹಾಗೂ ಪರಲೋಕದ ಮೇಲೆ ವಿಶ್ವಾಸವಿರುವಾತನು ತನ್ನ ಅತಿಥಿಯನ್ನು ಗೌರವಿಸಬೇಕು. ಅಲ್ಲಾಹನ ಮೇಲೆ ಮತ್ತು ಪರಲೋಕದ ಮೇಲೆ ವಿಶ್ವಾಸವಿರುವವನು ಮಾತಾಡಿದರೆ ಒಳ್ಳೆಯ ಮಾತನ್ನೇ ಆಡಬೇಕು, ಇಲ್ಲವಾದರೆ ಮೌನವಾಗಿರಬೇಕು.'' (ಮುಸ್ಲಿಮ್)

ಉಮರ್ ಬಿನ್ ಖತ್ತಾಬ್(ರ) ಹೇಳುತ್ತಾರೆ- ನಾನು ಅಬೂದರ್ರ್(ರ) ಬಳಿ ಬಂದಾಗ ಅವರು ಮಸೀದಿಯಲ್ಲಿ ಕಪ್ಪನೆಯ ಕಂಬಳಿ ಹೊದ್ದು ಒಂಟಿಯಾಗಿ ಕುಳಿತಿದ್ದರು. ನಾನು ಈ ರೀತಿ ಹೇಳಿದೆ, 'ಓ ಅಬೂ ದರ್ರ್! ಈ ಒಂಟಿತನವೇಕೆ?' ಅಬೂದರ್ರ್(ರ) ಹೇಳಿದರು: ''ಪ್ರವಾದಿವರ್ಯರು(ಸ) ಈ ರೀತಿ ಹೇಳಿರುವುದನ್ನು ನಾನು ಕೇಳಿರುವೆ. ಕೆಟ್ಟ ಸಂಗಾತಿಯಿಂವ ಒಂಟಿತನ ಉತ್ತಮವಾಗಿದೆ ಮತ್ತು ಒಳ್ಳೆಯ ಸಂಗಾತಿಯು ಒಂಟಿತನಕ್ಕಿಂತ

ಉತ್ತಮವಾಗಿದ್ದಾನೆ ಮತ್ತು ಒಳ್ಳೆಯ ಮಾತಾಡುವುದು ಮೌನಕ್ಕಿಂತ ಉತ್ತಮವಾಗಿದೆ ಹಾಗೂ ಮೌನವಾಗಿರುವುದು ಕೆಟ್ಟ ಮಾತಾಡುವುದಕ್ಕಿಂತ ಉತ್ತಮವಾಗಿದೆ.''

**(ರವಾಹಲ್ ಬೈಹಕಿ-ಫೀ ಶುಅಬುಲ್ ಈಮಾನ್)**

ಇಮಾಮ್ ಗಝ್ಝಾಲಿಯವರು ಮೌನವನ್ನು ಪರಿಚಯಿಸುತ್ತಾ ಹೀಗೆ ಹೇಳುತ್ತಾರೆ.

ಮೌನವು ಯಾವುದೇ ಕಷ್ಟವಿಲ್ಲದೆ ಮಾಡುವ ಆರಾಧನೆಯಾಗಿದೆ.

ಗೋಡೆಯಿಲ್ಲದ ಕೋಟೆಯಾಗಿದೆ.

ಆಯುಧವಿಲ್ಲದೆ ಪಡೆದ ವಿಜಯವಾಗಿದೆ.

ಕಿರಾಮನ್ ಕಾತಿಬೀನ್*ಗಳಿಗೆ ವಿಶ್ರಾಂತಿಯಾಗಿದೆ.

ವಿನಯದಿಂದಿರುವವರ ವಿಶೇಷತೆಯಾಗಿದೆ.

ಆಡಳಿತಗಾರರ ಠೀವಿಯಾಗಿದೆ.

ಯುಕ್ತಿಯ ಸಾರಾಂಶವಾಗಿದೆ.

ಅಜ್ಞಾನಿಗಳ ಉತ್ತರವಾಗಿದೆ.

ಇದಕ್ಕೆ ಪ್ರತಿಯಾಗಿ ಹರಟೆ ಕೊಚ್ಚುವುದನ್ನು ಅಪ್ರಿಯವೆಂದು ಸಾರಲಾಗಿದೆ.

ಪ್ರವಾದಿವರ್ಯರು(ಸ) ಹೀಗೆ ಹೇಳಿರುವರು: ''ಅಲ್ಲಾಹನ ಸ್ಮರಣೆಯಲ್ಲದೆ ಇತರ ಯಾವುದೇ ಮಾತನ್ನು ಹೆಚ್ಚು ಹೆಚ್ಚಾಗಿ ಮಾತಾಡಬೇಡಿ. ಏಕೆಂದರೆ ಹೀಗೆ ಮಾಡುವಾತನ ಹೃದಯ ಕಠೋರವಾಗುತ್ತದೆ ಮತ್ತು ಕಠೋರ ಹೃದಯವಿರುವಾತನು ಅಲ್ಲಾಹನಿಂದ ಅತ್ಯಂತ ದೂರವಿರುವವನಾಗಿದ್ದಾನೆ.'' **(ವರದಿ: ಇಬ್ನು ಉಮರ್(ರ)- ತಿರ್ಮಿದಿ)**

ಮೌಲಾನ ಅಶ್ರಫ್ ಅಲಿ ಥಾನವಿಯವರು(ರ) ಹೇಳುತ್ತಾರೆ:

ಸದಾ ಹರಟೆ ಕೊಚ್ಚುವುದರಲ್ಲಿ ಮತ್ತು ಇತರರನ್ನು ನಿಂದಿಸುವುದರಲ್ಲಿ ತಲ್ಲೀನನಾಗಿರುವಂತಹ ವ್ಯಕ್ತಿಗೆ ಆಂತರಿಕ ಸಮೃದ್ಧಿ ಎಂದೂ ಪ್ರಾಪ್ತವಾಗುವುದಿಲ್ಲ, ಏಕೆಂದರೆ ತನ್ನ ಅಂತಿಮ ತಾಣದ ಬಗ್ಗೆ ನಿಶ್ಚಿಂತೆಯಾಗಿರುವವನು ಮಾತ್ರ ಇತರರ ತಪ್ಪುಹುಡುಕುವ ಮತ್ತು ಹರಟೆ ಕೊಚ್ಚುವಂತಹ ಚಟುವಟಿಕೆಗಳಲ್ಲಿ ನಿರತನಾಗಿರುತ್ತಾನೆ.

ಒಟ್ಟಿನಲ್ಲಿ ನಾಲಗೆಯ ಸಂರಕ್ಷಣೆಯು ಮನುಷ್ಯನ ಆತ್ಮ ಸಂಸ್ಕರಣೆಯ ನಿಟ್ಟಿನಲ್ಲಿ ಬಹು ಮುಖ್ಯವಾದದ್ದು. ಅಗತ್ಯವಿದ್ದಲ್ಲಿ ಮಾತ್ರ ಮಾತನಾಡುವುದು ಹಾಗೂ ಅನಗತ್ಯ ಸಂದರ್ಭದಲ್ಲಿ ನಾಲಗೆಯನ್ನು ನಿಯಂತ್ರಿಸುವುದು ಆತ್ಮ ಸಂಸ್ಕರಣೆ ಮಾಡುವವರಿಗೆ ಅವಶ್ಯವಾಗಿದೆ ಹಾಗೂ ಇದರಲ್ಲೇ ಅವರ ಮುಕ್ತಿಯಿದೆ.

ಪ್ರವಾದಿವರ್ಯರು(ಸ) ಹೀಗೆ ಹೇಳಿದ್ದಾರೆ: ''ಸತ್ಯವಿಶ್ವಾಸಿಯು ಹಂಗಿಸುವವ, ಶಪಿಸುವವ, ಅಶ್ಲೀಲ ನುಡಿಯುವವ ಮತ್ತು ಕೆಟ್ಟ ಮಾತು ಆಡುವವನಾಗಿರುವುದಿಲ್ಲ.

**(ವರದಿ: ಅಬ್ದುಲ್ಲಾ(ರ)-ತಿರ್ಮಿದಿ)**

* ಮನುಷ್ಯನ ಒಳ್ಳೆಯ ಮತ್ತು ಕೆಟ್ಟ ಕರ್ಮಗಳನ್ನು ದಾಖಲಿಸುವ ದೇವಚರರು.

# ನಾಲಗೆ ನಿಯಂತ್ರಣ ಏಕೆ ತಪ್ಪುತ್ತದೆ?

ಈ ಎಲ್ಲ ಸಂವಾದದ ನಂತರ ಕೊನೆಯಲ್ಲಿ ನಾಲಗೆಯನ್ನು ನಿಯಂತ್ರಿಸುವುದು ಹೇಗೆಂಬುದು ಮುಖ್ಯವಾಗುತ್ತದೆ.

ನಾಲಗೆಯಿಂದಾಗುವ ಪಾಪಗಳು ಯಾವ ರೀತಿ ಮನುಷ್ಯನ ಚಾರಿತ್ರ್ಯಕ್ಕೆ ಕಳಂಕ ತರುತ್ತವೆ ಹಾಗೂ ಯಾವ ರೀತಿ ಪರಲೋಕದಲ್ಲಿ ಯಾತನೆಗೆ ಕಾರಣವಾಗುತ್ತವೆ ಎಂಬುದನ್ನು ತಿಳಿಯದವರು, ನಾಲಗೆಯ ಮೇಲಿನ ನಿಯಂತ್ರಣ ತಪ್ಪುವುದರಲ್ಲಿ ಆಶ್ಚರ್ಯವೇನಿಲ್ಲ. ಆದರೆ ಕುರ್‌ಆನ್ ಹಾಗೂ ಪ್ರವಾದಿವರ್ಯರ(ಸ) ವಚನಗಳ ಜ್ಞಾನವಿರುವವರು ಸಹ ಹಲವಾರು ಸಲ ನಾಲಗೆಯ ನಿಯಂತ್ರಣ ಕಳೆದುಕೊಂಡು ಸ್ಪಷ್ಟ ಪಾಪಕ್ಕೆ ದಾರಿ ಮಾಡಿಕೊಡುವಂತಹ ಮಾತಾಡುವುದು ದುಃಖದ ಸಂಗತಿಯಾಗಿದೆ.

ಇಷ್ಟೇ ಅಲ್ಲ, ನಾಲಗೆಯ ಪಾಪಗಳಿಂದಾಗಿ ಸಿಗುವ ಯಾತನೆಯ ಅರಿವಿದ್ದು, ಅದನ್ನು ನಿಯಂತ್ರಿಸಬೇಕೆಂಬ ಬಯಕೆ ಮನಸ್ಸಿನಲ್ಲಿದ್ದು ಅದಕ್ಕಾಗಿ ಸತತ ಪ್ರಯತ್ನ ಮಾಡುವವರು ಸಹ ಕೆಲವು ಸಲ ನಾಲಗೆಯ ಸಂರಕ್ಷಣೆಯಲ್ಲಿ ವಿಫಲವಾಗಿ ಪರನಿಂದೆಯಲ್ಲಿ ತೊಡಗುತ್ತಾರೆ.

ಹೀಗೆ ಎಲ್ಲ ಅರಿತಿದ್ದು, ನಾಲಗೆಯ ನಿಯಂತ್ರಣಕ್ಕೆ ಎಲ್ಲ ಪ್ರಯತ್ನಗಳನ್ನು ಮಾಡಿದಾಗ ಅದರ ಮೇಲೆ ನಮ್ಮ ನಿಯಂತ್ರಣ ಅಸಾಧ್ಯವೇ?

ಮೇಲಿನ ವಾದ ಸರಿಯೆನಿಸಿದರೂ ವಾಸ್ತವದಲ್ಲಿ ಎಷ್ಟೋ ಸಲ ಮನುಷ್ಯ ತನಗರಿವಿಲ್ಲದೆಯೇ ನಾಲಗೆಯ ಮೇಲಿನ ತನ್ನ ನಿಯಂತ್ರಣ ಕಳೆದುಕೊಳ್ಳುತ್ತಾನೆ. ಆಗ ಅವನಿಗೆ ಈ ನಾಲಗೆ ನನ್ನದೇ? ಅಥವಾ ಬೇರೆಯವರದೇ? ಎಂಬ ಸಂಶಯ ಸಹ ಬರುತ್ತದೆ.

ಹೀಗೆ ನಾವು ಎಷ್ಟೇ ಪ್ರಯತ್ನಪಟ್ಟರೂ ನಾಲಗೆ ನಿಯಂತ್ರಣ ತಪ್ಪುವುದಕ್ಕೆ ಕಾರಣಗಳೇನು?

ನಮ್ಮ ಇತರ ಪಾಪಗಳಿಗೆ ಕಾರಣವಿರುವಂತೆ, ಇದಕ್ಕೂ ಸಹ ನಾವು ಇಸ್ಲಾಮಿನ ಆಜ್ಞೆಗಳ ಜ್ಞಾನ ಮಾತ್ರ ಹೊಂದಿ ಅದಕ್ಕೆ ಹೊಂದಿಕೊಳ್ಳುವಂತೆ ನಮ್ಮ ಹೃದಯದ ತರಬೇತಿ ಮಾಡದಿರುವುದೇ ನೈಜ ಕಾರಣವಾಗಿದೆ.

ಪ್ರವಾದಿ(ಸ) ಹೇಳಿದ್ದಾರೆ.

''ತನ್ನ ನಾಲಗೆ ಮತ್ತು ಗುಪ್ತಾಂಗಗಳ ಬಗ್ಗೆ(ಅವುಗಳನ್ನು ಪಾಪ ಕಾರ್ಯಗಳಿಗೆ ಉಪಯೋಗಿಸದಂತೆ ರಕ್ಷಿಸುವೆನೆಂದು) ಯಾರಾದರೂ ಭರವಸೆ ಕೊಟ್ಟರೆ ನಾನು ಅವನಿಗೆ ಸ್ವರ್ಗದ ಭರವಸೆ ನೀಡುವೆನು.''

''ಸತ್ಯವು ಒಳಿತಿನೆಡೆಗೆ ಒಯ್ಯುತ್ತದೆ. ಒಳಿತು ಸ್ವರ್ಗದೆಡೆಗೆ ಒಯ್ಯುತ್ತದೆ.''

''ಚಾಡಿಕೋರರು ಸ್ವರ್ಗ ಪ್ರವೇಶಿಸಲಾರರು.''

ಈಗ ಜ್ಞಾನದ ಮಟ್ಟಿಗೆ ನಾವು ಪ್ರವಾದಿವರ್ಯರ(ಸ) ಈ ವಚನಗಳನ್ನು ಓದಿಕೊಂಡರೆ ಸಾಲದು. ಅದರ ಗಾಢ ಪ್ರಭಾವ ನಮ್ಮ ಮೇಲೆ ಆಗಬೇಕಾದರೆ ನಮ್ಮ ಹೃದಯದಲ್ಲಿ ಸ್ವರ್ಗದ ನೈಜ ಬಯಕೆ ಮತ್ತು ಅದನ್ನು ಪ್ರವೇಶಿಸುವ ನೈಜ ಹಂಬಲವಿದ್ದಲ್ಲಿ ಮಾತ್ರ ಸಾಧ್ಯ. ಹಾಗಾದಲ್ಲಿ ಮಾತ್ರ ನಾವು ಸ್ವರ್ಗವನ್ನು ಸಮೀಪಿಸುವ ನಾಲಗೆಯ ಸಂರಕ್ಷಣೆ ಮತ್ತು ಸತ್ಯದ ಹಾದಿಯನ್ನು ಅನುಸರಿಸಬಹುದು ಹಾಗೂ ನಮ್ಮ ಸ್ವರ್ಗದ ಪ್ರವೇಶವನ್ನು ತಡೆಯುವ ಚಾಡಿಗಳಿಂದ ನಮ್ಮನ್ನು ರಕ್ಷಿಸಿಕೊಳ್ಳಬಹುದು.

ಆಗ ಮಾತ್ರ ನಮ್ಮ ನಾಲಗೆ ಕೆಟ್ಟ ಮಾತುಗಳತ್ತ ಎಷ್ಟೇ ಆಕರ್ಷಿಸಿದರೂ ನಾವು ಅದರ ಲಗಾಮು ಎಳೆದು ಅದನ್ನು ಸುಮ್ಮನಿರಿಸಬಹುದು. ಏಕೆಂದರೆ ಪರಲೋಕದಲ್ಲಿ ಶಾಶ್ವತ ವಿಜಯ ಮತ್ತು ಉನ್ನತ ದರ್ಜೆ ಗಳಿಸುವ ನೈಜ ಉತ್ಸಾಹದಲ್ಲಿ ಮಾತ್ರ ನಾಲಗೆಯನ್ನು ನಿಯಂತ್ರಿಸುವ ಶಕ್ತಿಯಿದೆ.

ನಾವು ಇಚ್ಛಿಸದಿದ್ದರೂ ನಮ್ಮ ನಿಯಂತ್ರಣ ತಪ್ಪಿ ನಮ್ಮ ಆಜ್ಞೆ ಮೀರಿ ಮಾತಾಡುವ ಶಕ್ತಿ ನಮ್ಮ ನಾಲಗೆಗಿಲ್ಲ. ವಾಸ್ತವದಲ್ಲಿ ಶಾಶ್ವತ ಸುಖ, ಶಾಂತಿ, ಸಮೃದ್ಧಿ ಹಾಗೂ ನೆಮ್ಮದಿಯಿರುವ ಜೀವನ ಗಳಿಸುವ ನಮ್ಮ ಉತ್ಸಾಹವು ದುರ್ಬಲವಾಗಿದ್ದಲ್ಲಿ ಮಾತ್ರ ನಮ್ಮ ನಾಲಗೆ ಅದರ ಲಾಭ ಪಡೆದು ನಮ್ಮನ್ನು ಸೋಲಿಸುವಲ್ಲಿ ಯಶಸ್ವಿಯಾಗಿ ಬಿಡುತ್ತದೆ.

ಹೀಗೆ ನಮ್ಮ ಪರಲೋಕ ವಿಶ್ವಾಸವು ಸುದೃಢವಾದಲ್ಲಿ ನಾವು ನಾಲಗೆ ನಿಯಂತ್ರಣವಷ್ಟೇ ಅಲ್ಲ, ಇತರ ಎಲ್ಲಾ ಪಾಪಗಳಿಂದ ದೂರವಿರಲು ಸಾಧ್ಯವಾಗಬಹುದು.

ಯಾವುದೇ ಸಂಶಯವಿಲ್ಲದೆ ಮರಣೋತ್ತರ ಜೀವನ, ಸ್ವರ್ಗ-ನರಕಗಳು ಸತ್ಯವೆಂದು ನಂಬಿದ ಮಾತ್ರಕ್ಕೆ ನಮ್ಮ ಪರಲೋಕ ವಿಶ್ವಾಸ ಸುದೃಢವಾಗಿದೆ ಎಂದರ್ಥವಲ್ಲ.

ನಮ್ಮ ಹೃದಯ, ಮನ ಮಸ್ತಿಷ್ಕಗಳಲ್ಲಿ ಅವುಗಳ ಪ್ರಭಾವ ಗಟ್ಟಿಯಾಗಿ ಬೇರೂರಬೇಕು ಮತ್ತು ನಾವು ನಮ್ಮ ಕಾಲ್ಪನಿಕ ಕಣ್ಣುಗಳಿಂದ ಸ್ಪಷ್ಟವಾಗಿ ಅವುಗಳನ್ನು ನೋಡುವಂತಿರಬೇಕು.

ಕುರ್‌ಆನ್ ಮತ್ತು ಪ್ರವಾದಿ ವಚನಗಳಲ್ಲಿ ಸ್ವರ್ಗ-ನರಕಗಳ ಬಗ್ಗೆ ಎಷ್ಟು ವಿವರವಾಗಿ ತಿಳಿಸಲಾಗಿದೆಯೆಂದರೆ ಅವುಗಳ ಗಾಢ ಅಧ್ಯಯನ ಮಾಡಿದಾಗ ಅವು ನಮ್ಮ ಅಂತರಾಳದ ಕಣ್ಣುಗಳಲ್ಲಿ ಸ್ಪಷ್ಟವಾಗಿ ಗೋಚರಿಸುತ್ತವೆ.

ಮನುಷ್ಯ ಯಾವ ವಿಷಯಗಳ ಬಗ್ಗೆ ಮತ್ತೆ ಮತ್ತೆ ಗಾಢ ವಿಚಾರ ನಡೆಸುತ್ತಾನೋ ಅದು ಸುಲಭವಾಗಿ ಅವನ ಮನಸ್ಸಿನಲ್ಲಿ ಬೇರೂರುತ್ತದೆ. ನಮ್ಮ ಜೀವನದ ಕ್ಷಣಗಳು ಅತ್ಯಂತ ತ್ವರಿತಗತಿಯಲ್ಲಿ ಸಾಗುತ್ತಿವೆ. ನಮ್ಮಲ್ಲಿನ ಎಲ್ಲಾ ಪ್ರೀತಿ-ಪ್ರೇಮ, ನಿಕಟ ಸಂಬಂಧಗಳ ಹೊರತಾಗಿಯೂ ಒಂದು ದಿನ ನಮ್ಮ ಸಂಬಂಧಿಕರೇ ನಮ್ಮನ್ನು ಬಿಳಿ ಬಟ್ಟೆಯಲ್ಲಿ ಸುತ್ತಿ ಮಣ್ಣಿನಲ್ಲಿ ಹೂತು ಹಾಕುವ ಕ್ಷಣವೂ ಶೀಘ್ರವೇ ಬರಲಿದೆ. ಮತ್ತೆ ಅದೆಷ್ಟೋ ಕಾಲದವರೆಗೆ ಗೋರಿಯಲ್ಲಿರಬೇಕು. (ಅದು ನಮಗಾಗಿ ಸ್ವರ್ಗದ ತೋಟಗಳ ಪೈಕಿ ಒಂದು ತೋಟವಾಗಬಹುದು ಅಥವಾ ನರಕದ ಕಂದಕಗಳ ಪೈಕಿ ಒಂದು ಕಂದಕವಾಗಬಹುದು.) ಮತ್ತೆ ಪುನರುತ್ಥಾನದ ದಿನ ನಮ್ಮ ನಮ್ಮ ಕರ್ಮಫಲಗಳನ್ನು ನಮ್ಮ ನಮ್ಮ ಕೈಗೆ ನೀಡಲಾಗುವುದು. ಅದರಲ್ಲೇನು ಬರೆದಿರುವುದೋ? ಅಲ್ಲಾಹನೇ ಬಲ್ಲ.

ಪರನಿಂದೆ, ಚಾಡಿ, ಸುಳ್ಳು, ಅಪವಾದ, ಕೆಡುಕಿನ ಮಾತುಗಳು, ಮೋಸ, ಅತಿಯಾಸೆ, ಧರ್ಮಭ್ರಷ್ಟತೆ, ಅಲ್ಲಾಹ್ ಮತ್ತು ಪ್ರವಾದಿವರ್ಯರ(ಸ) ಅವಿಧೇಯತೆಯೋ? ಅಥವಾ ಸತ್ಯ, ಧರ್ಮದ ಪ್ರೀತಿ, ಒಳ್ಳೆಯ ನಡತೆ, ಪ್ರಾಮಾಣಿಕತೆ, ನಾಲಗೆ ಸಂರಕ್ಷಣೆ, ಅಲ್ಲಾಹ್ ಮತ್ತು ಅವನ ಪ್ರವಾದಿವರ್ಯರ(ಸ) ಪ್ರೀತಿಯೋ?

ವಿಚಾರಣೆಯ ನಂತರ ನಮ್ಮ ಕೊನೆಯ ತಾಣ, ನೆಮ್ಮದಿ ಮತ್ತು ಸುಖ ಶಾಂತಿಯಿಂದ ಕೂಡಿರುವ, ಶಾಶ್ವತ ಜೀವನವಿರುವ, ಯಾವುದೇ ಕಣ್ಣು ಕಂಡಿರದ, ಯಾವುದೇ ಕಿವಿ ಆಲಿಸಿರದ ಮತ್ತು ಯಾವುದೇ ಮನಸ್ಸು ಯೋಚಿಸಿರದಂತಹ ಅನುಗ್ರಹಗಳು ಇರುವ ಸ್ವರ್ಗವೋ ಅಥವಾ ಅತ್ತ ಸಾಯಲೂ ಬಿಡದ ಇತ್ತ ಜೀವಿಸಲೂ ಬಿಡದ ಯಾತನೆಯಿಂದ ಕೂಡಿರುವ ಅವಮಾನಕಾರಿ ಜೀವನವಿರುವ ನರಕವೋ?

ಹೀಗೆ ನಮ್ಮ ದಿನನಿತ್ಯದ ಚಟುವಟಿಕೆಗಳಲ್ಲಿ ಸ್ವಲ್ಪ ಸಮಯವನ್ನು ಈ ರೀತಿ ಯೋಚಿಸಲು ಮೀಸಲಿಟ್ಟರೆ ಇನ್‌ಶಾ ಅಲ್ಲಾಹ್ ನಮ್ಮ ಪರಲೋಕ ವಿಶ್ವಾಸವು ಸುದೃಢವಾಗಿ ನಾವು ನಮ್ಮ ನಾಲಗೆಯ ಮೇಲೆ ನಿಯಂತ್ರಣ ಸಾಧಿಸಬಹುದಲ್ಲದೆ ಇತರ ಹಲವಾರು ಸಂಕಷ್ಟಗಳಿಂದ ಹೋರಾಡುವ ಶಕ್ತಿಯು ಸಹ ನಮಗೆ ಲಭಿಸುವುದು.

*****